# ನಮ್ಮ ಮಾನಸ

ಮಾರ್ಚ್ 2012

ಸಂಪುಟ : 5 ಸಂಚಿಕೆ : 11



*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 98804 67372*



*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*© : 26757159*





*ಚಂದಾ ವಿವರ*

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

**ನಮ್ಮ ಮಾನಸ**
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು - 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

ಪ್ರಾರಂಭ : 'ಮಾನವಿ' (1985ರಲ್ಲಿ),
ಅನಂತರ 'ಮಾನಸ',
ಈಗ 'ನಮ್ಮ ಮಾನಸ'


## ಒಳಗಿನ ಪುಟಗಳಲ್ಲಿ....



## ಸಹೃದಯ ಓದುಗರಲ್ಲಿ...

ನೀವು ನಮ್ಮ ಚಿಂತನೆ–ಗುರಿಯನ್ನು ಬಲಪಡಿಸುವಿರೆಂದು ನಮಗೆ ನಂಬಿಕೆ ಇದೆ. ನೀವು ಓದುತ್ತಿರುವ ಮಾನಸವನ್ನು ಹೊರತರಲು ನಿಮ್ಮ ಆರ್ಥಿಕ ನೆರವು, ಪ್ರೋತ್ಸಾಹ ಮುಖ್ಯ. ಮಾನಸವನ್ನು ಮತ್ತೊಮ್ಮೆ ನಿರಂತರವಾಗಿ ಜೀವಂತವಾಗಿಡಲು ಸಹೃದಯ ಓದುಗರ ಬೆಂಬಲದ ಅಗತ್ಯವಿದೆ. ನೀವು ಯಾವುದಾದರೊಂದು ಬಗೆಯಲ್ಲಿ ನಮ್ಮೊಂದಿಗೆ ಕೈಜೋಡಿಸಬಹುದು.

- ಪ್ರತಿ ತಿಂಗಳಿಗೊಮ್ಮೆ ಲೇಖನಗಳನ್ನು ಬರೆಯಿರಿ ಇಲ್ಲವೇ ಬೇರೆಯವರಿಂದ ಬರೆಯಿಸಿ, ಕಳುಹಿಸಿ.
- ವಾರ್ಷಿಕ ಚಂದಾದಾರರಾಗಿ ಮತ್ತು ಇನ್ನಷ್ಟು ಚಂದಾದಾರರನ್ನು ಪರಿಚಯಿಸಿ.
- ಮಾನಸದ ಒಂದು ತಿಂಗಳ ಮುದ್ರಣದ ಖರ್ಚು ರೂ. 7,500/– ರಲ್ಲಿ ಪೂರ್ತಿ ಇಲ್ಲವೇ ನಿಮಗೆ ಸಾಧ್ಯವಾದಷ್ಟು ಹಣವನ್ನು ಕೊಟ್ಟು ಬೆಂಬಲಿಸಿ.

ಕೈ ಜೋಡಿಸುವಿರೆಂಬ ಆಶಯದೊಂದಿಗೆ,

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ**

E-mail: nammamanasa@gmail.com
Contact: Disha K.R.: 9880467372, Lekha: 9686757053, Samudyatha : 97388 22836



ಸಂಪಾದಕೀಯ

# ಚಲನಶೀಲ ಸ್ವಾಯತ್ತ ಮಹಿಳಾ ರಾಜಕಾರಣ

ನಮ್ಮ ಮಾನಸಕ್ಕೆ ಮಾರ್ಚ್ 8, 2012ರ ಅಂತರ್ ರಾಷ್ಟ್ರೀಯ ಮಹಿಳಾ ವರ್ಷ ಅತ್ಯಂತ ಅವಿಸ್ಮರಣೀಯವಾದುದು.ಶತಮಾನಗಳ ಕಾಲ ತಮ್ಮ ಮೂಲಭೂತ ಹಕ್ಕುಗಳಿಗಾಗಿ ಮಹಿಳೆಯರು ಐತಿಹಾಸಿಕವಾಗಿ ಹೋರಾಟ ನಡೆಸಿದ ದಿನ ಅದು.ಎಲ್ಲಾ ಮನುಷ್ಯರ ವಿಮೋಚನೆ, ಬಿಡುಗಡೆಯನ್ನು ಅಪೇಕ್ಷಿಸುವ ಮಹಿಳಾ ಹೋರಾಟ ಅರ್ಧದಷ್ಟು ಜನಸಂಖ್ಯೆ ಸರಪಳಿಗಳಿಂದ ಬಂಧಿತರಾದಾಗ ಯಾವ ಸಮಾಜವೂ ವಿಮೋಚನೆಯನ್ನು ಹೊಂದುವುದಿಲ್ಲ ಎಂಬುದನ್ನು ಬಲವಾಗಿ ನಂಬುತ್ತದೆ. ಈ ಅಂತರ್ ರಾಷ್ಟ್ರೀಯ ಮಹಿಳಾ ವರ್ಷ ನಮ್ಮ ಮಾನಸದ ಒಂದು ಚಾರಿತ್ರಿಕ ಐತಿಹಾಸಿಕ ವರ್ಷವೆಂದು ನಾವು ಭಾವಿಸುತ್ತೇವೆ. ಏಕೆಂದರೆ ಪತ್ರಿಕೆಯನ್ನು ನಿಲ್ಲಿಸುವ ಹಂತದಲ್ಲಿ ಒಂದು ಯುವ ಪಡೆ ಮುಂದೆ ಬಂದು ಪತ್ರಿಕೆ ತರುವ ಜವಾಬ್ದಾರಿಯನ್ನು ಹೊರಲು ಮುಂದಾಗಿರುವುದು ಅರ್ಥಪೂರ್ಣವಾಗಿ ನಮಗೆ ಕಾಣುತ್ತಿದೆ. ನಮ್ಮ ಮಟ್ಟಿಗಂತು ಇದು ಒಂದು ಐತಿಹಾಸಿಕ ಅನುಭವ.

ಫೆಬ್ರವರಿ 2012ರಲ್ಲಿ ನಮ್ಮ ಮಾನಸ ಪತ್ರಿಕೆಯನ್ನು ನಿಲ್ಲಿಸುವ ಖಚಿತ ನಿರ್ಧಾರವನ್ನು ಸಂಪಾದಕೀಯ ಮಂಡಳಿ ತೆಗೆದುಕೊಂಡಿತ್ತು. ನಮ್ಮ ಮಾನಸದಂತಹ ಪತ್ರಿಕೆಯ ತಾತ್ವಿಕತೆಗಳು ನಿಂತ ನೀರಲ್ಲ, ಹರಿಯುತ್ತಿರುವ ನೀರು ಎಂಬುದು ನಮಗೆ ಸಿಗುತ್ತಿರುವ ಬೆಂಬಲದಿಂದ ಅರ್ಥವಾಗುತ್ತಿದೆ. ಪತ್ರಿಕೆಯನ್ನು ನಮ್ಮ ಮಾನಸ ತಾತ್ವಿಕ ಹಿನ್ನೆಲೆಯಲ್ಲಿಯೇ ನಾವು ಮುಂದುವರೆಸಿಕೊಂಡು ಹೋಗುತ್ತೇವೆ, ನಮಗೆ ಬೆಂಬಲ ನೀಡಿ, ನಮ್ಮ ಜೊತೆ ಕೈ ಜೋಡಿಸಿ ಎನ್ನುವ 8–10 ಜನರ ಯುವ ಗುಂಪೊಂದು ಮಾನಸದ ಜೊತೆ ನಿರಂತರ ಸಂಬಂಧ ಹೊಂದಿದ ಅನೇಕರನ್ನು ಸಂಪರ್ಕಿಸಿ ಸಭೆ ನಡೆಸಿದಾಗ ನಮ್ಮ ಮಾನಸ ದಂತಹ ಸ್ವಾಯತ್ತ ಪತ್ರಿಕೆಯ ಹರಿಯುವ ನೀರಿನ ಗುಣ ನಮಗೆ ಅರ್ಥವಾದುದು. ಹೊಸ ಚಿಗುರು–ಹಳೆ ಬೇರಿನ ಮಹತ್ವ ಕುರಿತು, ಯುವ ಜನಾಂಗದ ಆಶೋತ್ತರ ಕುರಿತು ಅವರು ಮಾತನಾಡಿದ್ದಾರೆ. ಪತ್ರಿಕೆಯನ್ನು ನೀವು ನಂಬಿದ ಸ್ವಾಯತ್ತ ತಾತ್ವಿಕ ವಿಚಾರಗಳನ್ನು ಅರ್ಥ ಮಾಡಿಕೊಳ್ಳುತ್ತಲೇ ನಾವು ತರುತ್ತೇವೆ, ಆ ಹಂತದಲ್ಲಿಯೇ ಸ್ವಾಯತ್ತ ಮಹಿಳಾ ಚಳವಳಿಯ ಜೊತೆ ನಿಕಟ ಸಂಬಂಧ ಹೊಂದುತ್ತೇವೆ. ಸರಿ–ತಪ್ಪುಗಳನ್ನು ವಿಮರ್ಶಿಸುತ್ತಾ ಸ್ತ್ರೀವಾದಿ ಚಿಂತನೆಗಳಿಗೆ, ಸಾಂಸ್ಕೃತಿಕ ವಲಯಕ್ಕೆ ಮುಖಾಮುಖಿಯಾಗಬೇಕೆನ್ನುವ ಈ ಯುವ ಪಡೆಯ ಆಶೋತ್ತರಗಳಿಗೆ ನೀರೆರೆಯುವ ಸಲುವಾಗಿ ನಮ್ಮ ಮಾನಸ ಪತ್ರಿಕೆ ಮುಂದುವರೆಯಲಿದೆ. ಯುವ ಜನಾಂಗದ ಕನಸುಗಳಲ್ಲಿ, ಮಾನಸ ಪತ್ರಿಕೆಯ ತಾತ್ವಿಕತೆಗಳು, ಯೋಜನೆಗಳು ಫೀನಿಕ್ಸ್‌ನಂತೆ ಪುನ; ಪುನ; ಜೀವಂತಿಕೆಯನ್ನು ಪಡೆಯಲಿ ಎಂದು ಫೆಬ್ರವರಿ 2012ರಲ್ಲಿ ಸಂಪಾದಕ ಮಂಡಳಿ ಆಶಿಸಿತ್ತು. ಆದರೆ ಇಷ್ಟೊಂದು ಬೇಗ ನಮ್ಮನ್ನೇ ಬೆಚ್ಚಿಸುವ ರೀತಿಯಲ್ಲಿ ಯುವ ಪಡೆಯೊಂದು ಮಾನಸದ ಟ್ರೆಡಿಷನ್‌ನೊಂದಿಗೆ ಸಂಪರ್ಕ ಸೇತುವೆಯಾಗಿ ಮುಂದುವರೆಯುತ್ತೇವೆ. ನಮಗೆ ಮಾರ್ಗದರ್ಶನ ನೀಡಿ, ನಮ್ಮೊಂದಿಗೆ ನೀವು ಕೈ ಜೋಡಿಸಿ, ಪತ್ರಿಕೆ ಮುಂದುವರಿಸಲು ಬೆಂಬಲ ನೀಡಿ ಎಂದು ನಮ್ಮನ್ನೇ ಸಭೆಗೆ ಕರೆಯುತ್ತಾರೆಂಬುದು ನಾವು ನಿರೀಕ್ಷಿಸಿರದ ಬೆಳವಣಿಗೆ. ನಮಗೇ ಆಶ್ಚರ್ಯ ಹುಟ್ಟಿಸಿದ ತಿರುವು. ಮಾನಸದ 27 ವರ್ಷಗಳ ಅನುಭವದಲ್ಲಿ ಮತ್ತೊಂದು ತಿರುವಿನಲ್ಲಿ ನಿಂತ ಅನುಭವ.

ಈ ಯುವ ತಂಡ ಜೀವನದಲ್ಲಿ, ಸಮಾಜದಲ್ಲಿ ಈಗ ಅಡಿ ಇಡುತ್ತಿದ್ದಾರೆ. ಹಾಗಾಗಿ ಇಷ್ಟು ವರ್ಷಗಳ ಕಾಲ ಮಾನಸವನ್ನು ಬೆಂಬಲಿಸಿದ ಓದುಗರು, ಸಹೃದಯರು ಇವರಿಗೆ ಬೆಂಬಲ ನೀಡಿ ಬೆಳೆಸಿ ಎಂದು ನಿಮ್ಮಲ್ಲಿ ಕೇಳಿಕೊಳ್ಳುತ್ತಿದ್ದೇವೆ. ಈ ತಂಡ ಸಮರ್ಥವಾಗಿ ಬೆಳೆಯುವುದಕ್ಕೆ ನಿಮ್ಮೆಲ್ಲರ ನೆರವು ಅಗತ್ಯ. ಈ ಯುವ ಪಡೆಯನ್ನು ಬೆಳೆಸಲು ನಿಮ್ಮ ಸಲಹೆ–ಸಹಾಯ–ಸಹಕಾರ ಅಗತ್ಯ. ಮೊದಲಿನ ಹಾಗೆ

- **ಲೇಖನ/ಕವನ/ವರದಿ ಕಳುಹಿಸಿ**
- **ಹೋರಾಟಗಳನ್ನು ಪರಿಚಯಿಸುವ ಸಂದರ್ಶನ, ಐತಿಹಾಸಿಕ ದಾಖಲೆ ವಿವರಗಳನ್ನು ಕಳುಹಿಸಿ.**
- **ಚಂದ ನವೀಕರಿಸಿ.**
- **ವೈಯಕ್ತಿಕ ದೇಣಿಗೆ ನೀಡಿ.**
- **ಸಂಚಿಕೆಗಳನ್ನು ಪ್ರಾಯೋಜಿಸಿ.**
- **ಲೇಖನಗಳನ್ನು ಪ್ರಾಯೋಜಿಸಿ.**

ಹೀಗೆ ಹತ್ತು ಹಲವಾರು ರೀತಿಯಲ್ಲಿ ಇಲ್ಲಿಯವರೆಗೆ ನೀವು ನಮಗೆ ಬೆಂಬಲ ನೀಡಿದ್ದೀರಿ. ಸಹೃದಯರು ಇಂತಹ ಬೆಂಬಲವನ್ನು ಈ ಯುವ ಪಡೆಗೂ ಮುಂದುವರಿಸಲಿ ಎಂಬುದು ನಮ್ಮ ಕಳಕಳಿಯ ಮನವಿ.

ಭಾರತೀಯ ಮಹಿಳೆಯರು ನಿರೀಕ್ಷಿಸಿರದ ಅಥವ ಅತ್ಯಂತ ಕಠಿಣವಾದ ಸವಾಲುಗಳನ್ನು ಎದುರಿಸುತ್ತಿರುವ ಇಂದಿನ ಸಂದರ್ಭದಲ್ಲಿ ಯುವ ಪಡೆಯೊಂದು ನಮ್ಮ ಮಾನಸ ಪತ್ರಿಕೆಯನ್ನು ತರುವ ಜವಾಬ್ದಾರಿಯನ್ನು ಹೊರಲು ಮುಂದಾಗಿರುವುದು ನಮಗೆ ಒಂದು ಹೃದಯ ಸ್ಪರ್ಶಿಯಾದ ವಿಚಾರವಾಗಿದೆ. ಭಾರತದ ಪ್ರಸ್ತುತ ಆರ್ಥಿಕ ಯೋಜನೆಗಳು ಕೈಗಾರಿಕೆ ಹಾಗೂ ರಫ್ತು ಆರ್ಥಿಕತೆ ಬೆಂಬಲಿಸುತ್ತಾ

ಕೃಷಿಯನ್ನು ನಿರ್ಮೂಲನೆಗೊಳಿಸುತ್ತಿದೆ. ಗೃಹ ಖಾತೆ ಸಚಿವ ಚಿದಂಬರ್‌ರವರ ಆಶಯವೆಂದರೆ 85% ಭಾರತವನ್ನು ನಗರೀಕರಿಸುವುದು. ಈ ಆಶಯ ಸಣ್ಣ ಹಿಡುವಳಿದಾರ ಹಾಗೂ ಭೂರಹಿತ ಕಾರ್ಮಿಕರ ಮೇಲೆ ಬೃಹತ್ತಾದ ಪರಿಣಾಮವನ್ನು ಬೀರುತ್ತದೆ..

ನಗರದಲ್ಲಿ ಗಾರ್ಮೆಂಟ್ಸ್, ರಫ್ತು ಪ್ರಾಸೆಸಿಂಗ್, ಮನೆಗೆಲಸ, ಕಟ್ಟಡ ಕೆಲಸ ಹಾಗೂ ಸೇವೆಗಳಲ್ಲಿ ಅಭದ್ರತೆಯ ಹಾಗೂ ಶೋಷಿತಗೊಳ್ಳುವಂತಹ ಕೆಲಸಗಳು ಹೆಚ್ಚು ಹೆಚ್ಚಾಗಿ ಬೆಳೆಯತೊಡಗಿದೆ. ಇಂತಹ ಕೆಲಸಗಳಲ್ಲಿ ಮಹಿಳೆಯರನ್ನು ಹೆಚ್ಚು ಹೆಚಾಗಿ ಬಳಸಿಕೊಳ್ಳಲಾಗುತ್ತದೆ. ಅವರ ನಿರಕ್ಷರತೆ, ಸಂಘಟಿತರಾಗದಿರುವುದು, ಕನಿಷ್ಠ ಕೂಲಿಗೆ ಒಪ್ಪುವುದು-ಇಂತಹವುಗಳನ್ನು ಬಳಸಿಕೊಂಡು ಮಹಿಳೆಯರ ಶ್ರಮವನ್ನು ಶೋಷಿಸುತ್ತಲೇ ಕಂಗೊಳಿಸುವ ಭಾರತ ರೂಪುಗೊಳ್ಳುತ್ತಿದೆ. ಇಂದು ವಾಸ್ತವದಲ್ಲಿ ಇರುವ ಖಾಯಂ ಕೆಲಸಗಳನ್ನು ಸ್ವಯಂ ನಿವೃತ್ತಿಯ ಮೂಲಕ ನಾಶಪಡಿಸುತ್ತಿರುವುದಲ್ಲದೆ ಗುತ್ತಿಗೆ ಆಧಾರದ ಕೆಲಸಗಳನ್ನು ಹೆಚ್ಚಿಸಲಾಗುತ್ತಿದೆ. ಬಂಡವಾಳಕ್ಕೆ ಅನುಗುಣವಾಗಿ ವರ್ತಿಸುವ ಆಡಳಿತದಲ್ಲಿರುವ ಸರ್ಕಾರಗಳು ಆರ್ಥಿಕ ಅಸಮಾನತೆಯನ್ನು ಉಂಟು ಮಾಡುತ್ತಲೇ ಇವೆ. ಹಾಗಾಗಿ ಭಾರತದ ಜನಸಂಖ್ಯೆಯ ಅರ್ಧದಷ್ಟು ಜನರು ಇಂದು ಬಡತನದ ರೇಖೆಯ ಕೆಳಗೆ ಬದುಕುತ್ತಿದ್ದಾರೆ.

ಇಲ್ಲಿ ಮಹಿಳೆಯರು ಏನಾಗಿದ್ದಾರೆ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.ಫಾರ್ಮಲ್ ಆರ್ಥಿಕತೆಯಲ್ಲಿ ಕೆಲಸ ಮಾಡುತ್ತಿರುವ 4% ಹೆಂಗಸರು ಇಂದು ಹೆಚ್ಚು ದುಡಿಮೆಯ ಹೊರೆಯನ್ನು ಹೊತ್ತಿದ್ದಾರೆ. ಸ್ವಯಂ ನಿವೃತ್ತಿ ತೆಗೆದುಕೊಂಡ ತಮ್ಮ ಸಹೋದ್ಯೋಗಿಗಳ ಕೆಲಸದ ಹೊರೆಯೊಂದಿಗೆ ಮನೆಯಲ್ಲಿ ಮನೆಗೆಲಸದ ಜವಾಬ್ದಾರಿಗಳನ್ನು ನಿಭಾಯಿಸಬೇಕಾಗುತ್ತದೆ. 96% ಇನ್‌ಫಾರ್ಮಲ್ ವಿಭಾಗದಲ್ಲಿ ದುಡಿಯುವ ಮಹಿಳೆಯರು 16ರಿಂದ 18 ಘಂಟೆಗಳ ಕಾಲ ಕೆಲಸ ಮಾಡುತ್ತಾ ನಶಿಸುತ್ತಲೇ ಇರುತ್ತಾರೆ.

ಈ ರೀತಿಯ ಆರ್ಥಿಕ ಅಸಮಾನತೆ ಬಂಡವಾಳ ವ್ಯವಸ್ಥೆಯನ್ನು ಬೆಂಬಲಿಸುತ್ತದೆ. ವಲಸಿಗರ ಅಸಹಾಯಕತೆಯನ್ನು ಬಳಸಿಕೊಂಡು ಅವರ ಕೂಲಿಯನ್ನು ಕಡಿಮೆ ಮಟ್ಟದಲ್ಲಿಯೇ ಇರಿಸುತ್ತದೆ. ಅಸಮಾನತೆ ಎಲ್ಲೆಲ್ಲಿಯೂ ಎದ್ದು ಕಾಣುತ್ತದೆ. ನಗರದ ಒಳಗೆ, ಸ್ಲಂಗಳಲ್ಲಿ ,ನಗರದ ಆಚೆ-ಈಚೆ ಪ್ರದೇಶದಲ್ಲಿ, ರಾಜ್ಯದ ವಿವಿಧ ಭಾಗಗಳಲ್ಲಿ, ಉತ್ತರ ಹಾಗೂ ದಕ್ಷಿಣ ಕರ್ನಾಟಕದಲ್ಲಿ ಈ ಆರ್ಥಿಕ ಅಸಮಾನತೆ ಎದ್ದು ಕಾಣುತ್ತದೆ. ಒಂದು ಕಡೆ ಖನಿಜಗಳು ಲೂಟಿಯಾಗಿ ಅಲ್ಲಿ ಬಡತನ ತಾಂಡವವಾಡುತ್ತಿದ್ದರೆ, ಇನ್ನೊಂದೆಡೆ ಅದನ್ನು ಲೂಟಿ ಹೊಡೆಯುವ ಮಾಫಿಯ ಗ್ಯಾಂಗ್ ಕಂಡುಬರುತ್ತದೆ.

ಅಸಮಾನತೆ  ಹಸಿವು, ಅಪರಾಧ, ಅಸಹಾಯಕತೆಯನ್ನು ಹುಟ್ಟು ಹಾಕುತ್ತಿದೆ. ಬಡವರ ಮನೆಯಲ್ಲಿ ಅಪೌಷ್ಟಿಕತೆ ನೃತ್ಯವಾಡುತ್ತಿದೆ. 5ರಿಂದ 9ರ ವಯಸ್ಸಿನ 70% ಹೆಣ್ಣುಮಕ್ಕಳಲ್ಲಿ ಅಪೌಷ್ಟಕತೆ ಇರುವುದು ಕಂಡುಬರುತ್ತಿದೆ. ಮಹಿಳೆಯರ ಮೇಲೆ ಎಲ್ಲಾ ರೀತಿಯ ಹಿಂಸೆಗಳು ಹೆಚ್ಚಾಗುತ್ತಿವೆ. ಭ್ರೂಣ ನಾಶದಿಂದ ಹಿಡಿದು, ವರದಕ್ಷಿಣೆ, ಅತ್ಯಾಚಾರ, ಲೈಂಗಿಕ ಕಿರುಕುಳದಂತಹ ಹಿಂಸೆಗಳು ಹೆಚ್ಚಾಗುತ್ತಲೇ ಇವೆ. 41% ವರದಿಯಾಗಿರುವ ಅಪರಾಧಗಳಲ್ಲಿ ಮನೆಯಲ್ಲಿಯೇ ಹಿಂಸೆಯ ಹೆಚ್ಚಳ ಇರುವುದರಿಂದ ಮನೆಯಲ್ಲಿ ಭದ್ರತೆ ಕಡಿಮೆಯಾಗುತ್ತಿದೆ. ಹೊಸ ತಾಂತ್ರಿಕ ಆವಿಷ್ಕಾರಗಳಾದ ಮೊಬೈಲ್, ಕ್ಯಾಮೆರ, ಇಂಟರ್‌ನೆಟ್ ಕೂಡಾ ಮಹಿಳೆಯರ ಮೇಲೆ ಹಿಂಸೆ ನಡೆಸುವ ಹೊಸ ಸ್ಥಳಗಳಾಗಿವೆ. ಮಹಿಳೆಯರ ಮೇಲಿನ ಹಿಂಸೆಯ ಸಂಸ್ಕೃತಿಯನ್ನು ಬೆಳೆಸುವಲ್ಲಿ ಇವು ಹೊಸ ಕಾರ್ಯಸ್ಥಾನಗಳಾಗಿವೆ.

ಬೃಹತ್ ಸಂಖ್ಯೆಯಲ್ಲಿ ಮಹಿಳೆಯರು ಕೆಲಸ ಮಾಡಲು ಮನೆಯಿಂದ ಆಚೆ ಹೋಗಬೇಕಾದ ಹೊಸ ಆರ್ಥಿಕ ವ್ಯವಸ್ಥೆಯಲ್ಲಿ ಬದಲಾಗುತ್ತಿರುವ ಅಧಿಕಾರ ಸಂಬಂಧಗಳು ಮನೆ ಹಾಗೂ ಸಮುದಾಯದಲ್ಲಿ ಒಂದು ನಿರೀಕ್ಷಿತ ಮರು ಹೊಡೆತವನ್ನು ನೀಡುತ್ತಿವೆ. ಒಂದು ಕಡೆ ಹಿಂದುತ್ವದ ಒತ್ತಡಗಳು ಹೆಂಗಸನ್ನು ಮನೆಗೆ ಮರಳಿ ಕಳಿಸುವ ಪ್ರಯತ್ನ ಮಾಡುತ್ತಿದ್ದರೆ ಒಟ್ಟಾಗಿ  ಬೆಳೆಯುತ್ತಿರುವ ಮೂಲವಾದಿತ್ವ ನಗರೀಕರಣ ಪ್ರದೇಶಗಳಲ್ಲಿ ಹೆಣ್ಣುಮಕ್ಕಳಿಗೆ ಡ್ರೆಸ್ ಕೋಡ್ ಹೇರುತ್ತವೆ.

ಹೀಗೆ ಮರು ಉಲ್ಬಣಗೊಳ್ಳುತ್ತಿರುವ ಹಿಂಸೆಯು ಹೊಸ ಆರ್ಥಿಕ ವ್ಯವಸ್ಥೆಯ ಐಡೆಂಟಿಟಿ ಪಾಲಿಟಿಕ್ಸ್‌ನಿಂದ ಹೆಚ್ಚಾಗುತ್ತಿದೆ. ಓಟ್ ಬ್ಯಾಂಕಿಗಾಗಿ, ಅಭಿವೃದ್ಧಿಯ ಸೇಬಿಗಾಗಿ ಒಂದು ಜಾತಿ ಇನ್ನೊಂದು ಜಾತಿಯ ಜೊತೆ ಹೊಡೆದಾಡುವ ಸಂದರ್ಭದಲ್ಲಿ – ಅವರು ತಮ್ಮನ್ನು ಸಮರ್ಥಿಸಿಕೊಳ್ಳಲು ಒಂದು ವಿಧಾನವೆಂದರೆ ಮರ್ಯಾದಾ ಹತ್ಯೆಯಂತಹ ಸಂಪ್ರದಾಯಗಳ ಮೂಲಕ ಮಹಿಳೆಯರಿಗೆ ಕಡಿವಾಣ ಹಾಕಲು ಪ್ರಯತ್ನಿಸುವುದು. ಸಂಸ್ಕೃತಿ, ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಈ ಹಿಂಸೆ ಎಲ್ಲಾ ಮಹಿಳೆಯರ ಮೇಲೂ ನಡೆಯುತ್ತಿದೆ. ಮನೆ, ರಸ್ತೆ, ಕಾಲೇಜು, ಕೆಲಸದ ಸ್ಥಳಗಳಲ್ಲಿ, ಯಾವುದೇ ಜಾತಿ, ವರ್ಗ, ಸಮುದಾಯದ ಹೆಂಗಸೂ ಸುರಕ್ಷಿತವಾಗಿಲ್ಲದಿರುವುದರಿಂದ ಯಾವ ಹೆಂಗಸೂ ವಿಮೋಚನೆ ಹೊಂದಲು ಸಾಧ್ಯವಿಲ್ಲ.

ಭಾರತದಲ್ಲಿ ನಡೆಯುತ್ತಿರುವ ಸ್ಥಿತ್ಯಂತರಗಳಿಂದ ಈಗ ಯುವ ದೇಶವಾಗಿ ಭಾರತ ಕಾಣಿಸಿಕೊಳ್ಳತೊಡಗಿದೆ. 50% ಭಾರತೀಯರು 25 ವರ್ಷದ ಒಳಗಿನವರಾಗಿರುತ್ತಾರೆ. ಅವರೇನು ಮಾಡುತ್ತಾರೆ, ಯೋಚಿಸುತ್ತಾರೆ, ತಿನ್ನುತ್ತಾರೆ, ಯಾರಿಗೆ ಕೆಲಸ ಮಾಡುತ್ತಾರೆ, ಯಾರಿಗೆ ಓಟು ಹಾಕುತ್ತಾರೆ, ಯಾರನ್ನು ಸ್ವಾಗತಿಸುತ್ತಾರೆ, ಯಾರಿಗೆ ವಿರೋಧ ವ್ಯಕ್ತಪಡಿಸುತ್ತಾರೆ, ಯಾರನ್ನು ಮದುವೆಯಾಗುತ್ತಾರೆ- ಇವು ರಾಜಕೀಯ ಪ್ರಶ್ನೆಗಳಾಗತೊಡಗಿವೆ. ಭಾರತದ ಭವಿಷ್ಯಕ್ಕೆ ಇದು ಮುಖ್ಯ. ಇಲ್ಲಿ ವರ್ಗರಹಿತ, ಜಾತಿರಹಿತ, ಹಿಂಸೆರಹಿತ, ಸಮಾಜದ ಕನಸನ್ನು ನಾವು ಮುಂದಿಡಬೇಕಾಗುತ್ತದೆ. ಮಹಿಳೆಯರು ಸ್ವಾಯತ್ತವಾಗಿ, ವಿಮೋಚನೆ ಹೊಂದಿದವರಾಗಿ ಘನತೆಯ ಬದುಕನ್ನೂ ಬದುಕುವಂತಾಗಬೇಕು,

ಈ ಕನಸು ಬಂಡವಾಳಶಾಹಿ, ಪಿತೃಪ್ರಧಾನ, ವರ್ಗ, ಜಾತಿ, ಧರ್ಮ, ಜನಾಂಗ, ದ್ವಿಲಿಂಗಿತ್ವದ ಕಲ್ಪನೆಗಳು ಮಾತ್ರ ಲಾಸ್ಯ ವಾಡುತ್ತಿರುವ ಸಮಾಜದಲ್ಲಿ ಸಾಧ್ಯವಾಗುವುದಿಲ್ಲ.ಮಾನಸದ ಯುವ ಪಡೆಯ ಮುಂದೆ ಅಥವಾ ನಮ್ಮೆಲ್ಲರ ಮುಂದಿರುವ ಸವಾಲೆಂದರೆ- ನಮಗೆ ಸಾಧ್ಯವಾಗುವ ವಿಧಾನಗಳಲ್ಲಿ ಈ ಕನಸು ನನಸಾಗುವಂತೆ ಮಾಡುವುದು.

■ *ಬೆಂಬಲ ಗುಂಪು*




# ಹಳೆಬೇರು ಹೊಸಚಿಗುರು

27 ವರ್ಷದ ಚರಿತ್ರೆ ಇರುವ ಮಾನಸ ಕಳೆದು ಹೋಗಬಾರದು. ಹೋರಾಟ-ಚಳವಳಿಯೊಂದಿಗೆ ಅವಿರತವಾಗಿ ತೊಡಗಿಸಿಕೊಂಡು ಬಂದಂತಹ ಎಲ್ಲಾ ಹಿರಿಯರೊಂದಿಗೆ, ಮಹಿಳೆಯರೊಂದಿಗೆ ಬಾಂಧವ್ಯವನ್ನು ಬೆಸೆಯಬೇಕೆಂದಿದ್ದೇವೆ. **ನಮ್ಮ ಮಾನಸ** ಯುವಜನರಿಗೂ ತಲುಪಬೇಕು. ಹೊಸಪೀಳಿಗೆಯ ಯುವತಿಯರ ಗೊಂದಲ-ಸಮಸ್ಯೆಗಳ ಮತ್ತು ಅವರ ಮೇಲಾಗುತ್ತಿರುವ ಹೊಸರೀತಿಯ ದೌರ್ಜನ್ಯದ ಬಗ್ಗೆಯೂ, ಮಾನಸ ಇನ್ನಷ್ಟು ಓದುಗರಿಗೆ ತಲುಪಿಸಬೇಕಿದೆ. ಈ ಯುವಪೀಳಿಗೆಯ ಬಗೆಗಿನ ಸಮಸ್ಯೆಗಳನ್ನು ವಿಶ್ಲೇಷಿಸಿ, ಹಲವು ವಿಮರ್ಶಾತ್ಮಕವಾದ ಲೇಖನಗಳು ಇನ್ನೂ ಬರಬೇಕಿದೆ. ಯುವಜನರಿಗೆ ಹೊಸ ಆಶಾಭಾವನೆಯ ರೂಪವಾಗಿ ದಿಕ್ಸೂಚಿಯಾಗಿ ಮಾನಸ ಕೆಲಸಮಾಡುವುದು ಬಾಕಿ ಇರುವಾಗ ನಿಲ್ಲಿಸಬೇಕೆಂಬ ತೀರ್ಮಾನ ನಿಜಕ್ಕೂ ಶೋಚನೀಯ. ಈಗಿನ ಯುವಪೀಳಿಗೆ ಮತ್ತು ಹಳೆಪೀಳಿಗೆಯ ಮಧ್ಯೆ ಒಂದಷ್ಟು ಅಂತರವಿದೆ ಅದನ್ನು ನಮ್ಮ ಬೆಂಬಲದ ಮೂಲಕ ಸರಿದೂಗಿಸಬಹುದೇನೋ ಎಂಬ ಆಶಯ ನಮ್ಮದು. ಇಲ್ಲವಾದ್ದಲ್ಲಿ ಯುವಜನರಲ್ಲಿರುವ ಒಂದಷ್ಟು ಸಾಮಾಜಿಕ ಕಳಕಳಿಯೂ ಹೊರಟು ಹೋಗಬಹುದೇನೋ ಎಂಬ ಭಯ. ಜಾಗತೀಕರಣ, ಮಾಧ್ಯಮದ ಭರಾಟೆಯಲ್ಲಿ ಯುವಜನರು ಕೊಚ್ಚಿಹೋಗುತ್ತಿದ್ದಾರೆ. ಇಂದಿನ ಯುವಜನರಿಗೆ ಜೀವನವನ್ನು ಎದುರಿಸುವ ಆತ್ಮಸ್ಥೈರ್ಯ ಕುಗ್ಗಿಹೋಗುತ್ತಿದೆ. ಇದಾಗಬಾರದೆಂದರೆ, ಮೌಲ್ಯಗಳಿಗಾಗಿಯೇ ಬಹಳಷ್ಟು ವರುಷಗಳಿಂದಲೂ ಕೆಲಸ ಮಾಡಿದ **'ನಮ್ಮ ಮಾನಸ'**ದಂತಹ ಪತ್ರಿಕೆಗಳು ಸದಾ ಯುವಜನರೊಂದಿಗಿನ ದನಿಯಾಗಿ ಕೆಲಸ ಮಾಡುವ ಅಗತ್ಯತೆ ಇಂದು ಹೆಚ್ಚಿದೆ. ನಮ್ಮಲ್ಲಿ ಕೆಲವರು ಮಾನಸವನ್ನು ಚಿಕ್ಕಂದಿನಿಂದಲೇ ನೋಡುತ್ತಾ ಬೆಳೆದಿದ್ದಾರೆ, ಅದರ ಒಂದು ಭಾಗವಾಗಿಯೇ ಬಿಟ್ಟಿದ್ದಾರೆ ಎಂದರೆ ಅತಿಶಯೋಕ್ತಿ ಯೇನಲ್ಲ. ಆ ಎಲ್ಲ ಹೊಸ ಚಿಗುರುಗಳು **ನಮ್ಮ ಮಾನಸದ ಪತ್ರಿಕೆ** ಯೊಂದಿಗೆ ಒಂದಲ್ಲ ಒಂದು ರೀತಿಯಲ್ಲಿ ಕೈಜೋಡಿಸಲು ತಯಾರಿದ್ದಾರೆ.

ಮಹಿಳಾ ಅಧ್ಯಯನದ, ಪ್ರತಿಕೋದ್ಯಮದ ವಿದ್ಯಾರ್ಥಿನಿಯರಾಗಿ ನಾವು ಮಹಿಳೆಯರಿಗೆ ಮೀಸಲಾತಿ ಸಿಗುತ್ತಿಲ್ಲ, ಹಕ್ಕುಗಳಿಲ್ಲ ಎಂಬ ಮಾತುಗಳನ್ನು ಆಗಾಗ ಹೇಳುತ್ತಲೇ ಇರುತ್ತೇವೆ. ಹಾಗಿರುವಾಗ, ಮಹಿಳಾ ಹಕ್ಕು-ಮೌಲ್ಯಗಳಿಗಾಗಿಯೇ ನಿರಂತರವಾಗಿ ಕೆಲಸ ಮಾಡುತ್ತಲೇ ಬಂದ ಮಾನಸದಂತಹ ಪತ್ರಿಕೆಗಳು ಪರಿಸ್ಥಿತಿಗೆ ಬಲಿಯಾಗಿ ಮುಚ್ಚಬೇಕಾದಂತಹ ಸಂದರ್ಭದಲ್ಲಿ ಅದರೊಂದಿಗೆ ಕೈಗೂಡಿಸಬೇಕಾದುದು ನಮ್ಮಂತಹ ಯುವಪೀಳಿಗೆಯವರ ಕರ್ತವ್ಯವೇ ಆಗಿರುತ್ತದೆ. ನಾವು ಬೆಂಬಲಿಸುವುದರ ಬಗ್ಗೆ ಎರಡು ಮಾತಿಲ್ಲ. ನಾವು ಬೆಂಬಲಿಸಲೇಬೇಕು.

ತಮ್ಮಲ್ಲಾಗುವ ನೋವುಗಳನ್ನು, ಮಾನಸಿಕ ಹಿಂಸೆಗಳನ್ನು, ಆಲೋಚನೆಗಳನ್ನು, ದ್ವಂದ್ವಗಳನ್ನು ವ್ಯಕ್ತಪಡಿಸಲು ತುಡಿಯುವ ಪ್ರತಿಯೊಬ್ಬರಿಗೂ ಈ ಪತ್ರಿಕೆ ಒಂದು ದಾರಿದೀಪವಾಗಬೇಕಿದೆ. ಮಹಿಳೆಯರಾಗಿ ನಮಗೆ ಇದರ ಅಗತ್ಯತೆ ಹೆಚ್ಚಿದೆ. ರಾಜ್ಯದಲ್ಲಿ ಮಹಿಳೆಯರಿಗೆಂದೇ ಮೀಸಲಾಗಿರುವ ಪತ್ರಿಕೆ ಇದೊಂದೇ. 27 ವರ್ಷದ ಇತಿಹಾಸವಿರುವ ರಾಜ್ಯದ ಮಹಿಳಾ ಪತ್ರಿಕೆಯು ಕಳೆದುಹೋದರೆ, ಹೊಸದಾಗಿ ಏನನ್ನು ತಾನೇ ಮಾಡಲು ಸಾಧ್ಯ. ಇರುವುದನ್ನೇ ಉಳಿಸಿಕೊಳ್ಳಲಾಗದೇ ಹೋದರೆ ನಾವು ಏನಾದರೂ ಮಾಡುತ್ತೇವೆ ಎಂದು ಹೇಳುವುದು ಗಾಳಿಮಾತಾಗುತ್ತದೆ.

ನಮಗೆ ಪಾಠ ಮಾಡುವಾಗ ಶಿಕ್ಷಕರು ಕೆಲವೊಮ್ಮೆ 80-90ರ ಚಳುವಳಿಯನ್ನು ನೆನಪಿಸಿಕೊಂಡು ಇಂದಿನ ಯುವಜನರು ಪ್ರಯೋಜನಕ್ಕೆ ಬಾರದವರು, ಚಳುವಳಿಯ ಗ್ರಾಸವಿಲ್ಲದಿರುವವರು, ಇವರಿಗೆ ಹಕ್ಕುಗಳ ಬಗ್ಗೆ ಏನೂ ತಿಳಿಯುವುದಿಲ್ಲ ಎಂಬ ದೋಷಾರೋಪಣೆ ಮಾಡುತ್ತಿರುತ್ತಾರೆ. ಅಂದಿನ ದಿನದ ಮಹಿಳಾ ಚಳವಳಿ, ಸುಧಾರಣಾ ಚಳವಳಿ, ಹಕ್ಕಿನ ಹೋರಾಟದ ಬಗ್ಗೆ ತಿಳಿಸಿ ಹೇಳುವವರಿಲ್ಲದೆ ವಿದ್ಯಾರ್ಥಿಗಳು ಇಂತಹ ಮಾತುಗಳಿಗೆ ಗುರಿಯಾಗ ಬೇಕಿದೆ.

ಇವತ್ತಿನ ವಾಸ್ತವಚಿತ್ರ ಬದಲಾಗಿದೆ. ಮಹಿಳೆಯರನ್ನು ಅಂದು ನೋಡುತ್ತಿದ್ದ-ನಡೆಸಿಕೊಳ್ಳುತ್ತಿದ್ದ ರೀತಿಗೂ ಇಂದಿನ ರೀತಿಗೂ ಬಹಳ ವ್ಯತ್ಯಾಸವಿದೆ. ಈ ಸಂದರ್ಭದಲ್ಲಿ ಯುವಜನರು ಇಂತಹ ಪತ್ರಿಕೆಗಳಿಗೆ ಕೈಗೂಡಿಸಿದರೆ, ಹೊಸ ಚರ್ಚೆ, ಆಯಾಮಗಳು ಶುರುವಾಗುತ್ತವೆ.

ಈಗ ಕಾಣುವ ಜಾಗತೀಕರಣ, ವ್ಯಾಪಾರೀಕರಣಗಳು, ಕಂಪ್ಯೂಟರೀಕರಣ, ಸಂಪರ್ಕಜಾಲಗಳು ಆಗ ಇರಲಿಲ್ಲ. ಸಂಪರ್ಕಜಾಲ ವೊಂದರಲ್ಲೇ ಎಂತೆಂತಹ ದೌರ್ಜನ್ಯ, ಕೃತ್ಯಗಳು ನಡೆಯುತ್ತಲಿವೆ. ಆ ವಿಷಯಗಳ ಬಗ್ಗೆಯೂ ಹೆಚ್ಚು ಚರ್ಚೆಯಾಗಬೇಕಿದೆ. ಹಂತ ಹಂತವಾಗಿ ಎಲ್ಲಾ ರಂಗಗಳಲ್ಲೂ ಮಹಿಳೆಯರ ಪ್ರವೇಶದಿಂದಾಗಿ ಮಹಿಳೆಯರು ಕ್ರಮೇಣ ಕುಟುಂಬದಲ್ಲಿ, ಸಮಾಜದಲ್ಲಿ ತನಗಿರುವ ಸ್ಥಾನವನ್ನು ಅರ್ಥ ಮಾಡಿಕೊಳ್ಳುತ್ತಿದ್ದಾಳೆ. ಒಟ್ಟು ಸಮಾಜವನ್ನು ಬದಲಾಯಿಸುವ ಕಾರ್ಯಕ್ರಮದಲ್ಲಿ ಮಹಿಳೆ ಭಾಗೀದಾರಳಾಗುತ್ತಿದ್ದಾಳೆ.

ಈ ಸ್ಥಿತಿಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಆಳವಾಗಿ ಅಧ್ಯಯನ ಮಾಡಿ ಅರ್ಥ ಮಾಡಿಕೊಳ್ಳಬೇಕಾದ ಕೆಲಸವಿನ್ನೂ ಬಾಕಿಯಿದೆ ಎನ್ನುವುದು ನಮ್ಮ ಅಭಿಪ್ರಾಯ. ಆಧುನಿಕ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯು ಯಾವ ಪರಿಸ್ಥಿತಿಯಲ್ಲಿದ್ದಾಳೆ ಎಂಬುದನ್ನು ಅರ್ಥ ಮಾಡಿಕೊಂಡಾಗ ಮಾತ್ರ ಆ ಸ್ಥಿತಿಯನ್ನು ಬದಲಾಯಿಸಲು ಸಾಧ್ಯ. ಆ ನಿಟ್ಟಿನತ್ತ ದಾಪುಗಾಲು ಹಾಕುವ ದಿಟ್ಟ ಮಹಿಳಾ ಪತ್ರಿಕೆ ಈಗಿನ ಅತ್ಯಗತ್ಯ ಅವಶ್ಯಕತೆ.

27 ವರ್ಷವೆಂದರೆ ತಮಾಷೆಯ ಮಾತಲ್ಲ. ಹೋರಾಟ-ಚಳುವಳಿಗಳು ಇದ್ದಾಗ ನಮ್ಮ ಮಾನಸದಂತಹ ಪತ್ರಿಕೆಗಳನ್ನು ತರುವುದು ಅಷ್ಟು ಕಷ್ಟಕರವಲ್ಲವೇನೋ, ಆದರೆ ಅಭಿವೃದ್ಧಿಯ ಹೆಸರಿನಲ್ಲಿ ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯ, ಹಿಂಸೆಗಳ ಈಗಿನ ಹೊಸ ಪರಿಸ್ಥಿತಿ-ಸಮಸ್ಯೆಗಳ ಸಂಧರ್ಭದಲ್ಲಿ ನಮ್ಮ ಮಾನಸದಂತಹ ಪತ್ರಿಕೆಯ ಜವಾಬ್ದಾರಿ-ಅವಶ್ಯಕತೆ ಇನ್ನೂ ಹೆಚ್ಚಿದೆ. ಯುವಜನರಿಗೆ ಒಂದು ಕಡೆ ಚಳುವಳಿ ಎಂದರೇನು ಎಂದು ತಿಳಿದುಕೊಳ್ಳುವುದಕ್ಕೆ ಯಾವ ಚಳುವಳಿಯೂ ನಡೆಯುತ್ತಿಲ್ಲ ಮತ್ತು ಮತ್ತೊಂದೆಡೆ ತಿಳಿಸಿಹೇಳುವುದಕ್ಕೆ ಜನರು ತಯಾರಿಲ್ಲ. ನಾವೆತ್ತಕಡೆಗೆ ನಡೆಯಬೇಕು ಎಂಬ ಗೊಂದಲದಲ್ಲಿರುವ ನಮ್ಮಂತಹ ಸಾಮಾಜಿಕ ಕಳಕಳಿ ಇರುವ ಯುವತಿಯರಿಗೆ ಒಂದು ರೀತಿಯ ಓಯಸಿಸ್ ನಮ್ಮ ಮಾನಸ. ಬಹಳಷ್ಟು ಅನುಭವವಿರುವ ಮಹಿಳಾಹೋರಾಟಗಾರ್ತಿಯರ ಜೊತೆಯಲ್ಲಿ ನಡೆಯುವ ಸುದೈವಕಾಶವೆಂದರೆ ತಪ್ಪಾಗಲಾರದು. ಚಳುವಳಿಯ-ಹೋರಾಟದ ಅನುಭವ ಮತ್ತು ಮುಂದಿನ ಚಳುವಳಿಗೆ ಪೂರಕವಾಗಿ ನಮ್ಮ ಮಾನಸದಲ್ಲಿ ತೊಡಗಿಸಿಕೊಳ್ಳಬೇಕು ಎಂಬುದು ನಮ್ಮೆಲ್ಲರ ಆಶಯ.

ನಮಗೆ ನಮ್ಮದೇ ಆದ ಜವಾಬ್ದಾರಿಗಳಿವೆ ನಿಜ. ಆದರೆ ಒಂದು ಒಳ್ಳೆ ಉದ್ದೇಶಕ್ಕೆ ಕೈಜೋಡಿಸುವಾಗ ಆ ಜವಾಬ್ದಾರಿ-ಕೆಲಸ-ಒತ್ತಡಗಳನ್ನು ಮುಂದಿಟ್ಟು ದೂರ ಉಳಿಯುವುದು ಒಂದು ನೆಪವಾಗುತ್ತದೆ. ಸಮಾಜದಲ್ಲಿರುವ ಕಂದಾಚಾರ, ಆಚಾರ-ವಿಚಾರಗಳು, ಮೂಢನಂಬಿಕೆ, ಸಮಸ್ಯೆ-ದೌರ್ಜನ್ಯಗಳ ಬಗ್ಗೆ ಜನರು ಸ್ಪಂದಿಸಿ ಮಾತನಾಡುತ್ತಾರೆ. ಕೇವಲ ಮಾತು ಮತ್ತು ಬೆಂಬಲಗಳಿಂದ ಮಾತ್ರವೇ ಸಾಮಾಜಿಕ ಸಮಸ್ಯೆಗಳನ್ನು ಸರಿಪಡಿಸಲಿಕ್ಕೆ ಸಾಧ್ಯವಿಲ್ಲದ ಮಾತು. ಈ ಸಾಮಾಜಿಕ ಸಮಸ್ಯೆಗಳನ್ನು ತಳಮಟ್ಟದಿಂದಲೇ ಗುರುತಿಸಿ ಸರಿಪಡಿಸುವಂತಹ ಕೆಲಸ ಮಾಡಿದಾಗ, ಹೊಸ ಆಯಾಮ ಸಿಕ್ಕೀತು. ಕೆಲಸ, ಮನೆ-ಕುಟುಂಬ, ಅವರ ಆಚಾರ-ವಿಚಾರಗಳಿಗೆ ಹೊಸ ದಿಕ್ಕನ್ನು ಕೊಡುವಂತಹ ಲೇಖನಗಳು ಬರಬೇಕು. ಆಗ ಮಹಿಳೆಯರನ್ನು ನೋಡುವ ಮತ್ತು ನಡೆಸಿಕೊಳ್ಳುವ ರೀತಿ ಸರಿಯಾದೀತು. ಬೇಜಾರಿನ ಸಂಗತಿಯೇನೆಂದರೆ, ಈಗಿನ ಪತ್ರಿಕೆಗಳು ಕೇವಲ ವಿಷಯಸುತ್ತ ಮಾತ್ರವೇ ಇರುತ್ತವೆಯೇ ಹೊರತು, ವಾಸ್ತವತೆಯಿಂದ ಕೂಡಿರುವುದಿಲ್ಲ.

ಅಲ್ಲದೆ, ಪ್ರತಿಯೊಂದು ಘಟನೆ, ಸಂದರ್ಭ, ಸನ್ನಿವೇಶ, ಹಂತದಲ್ಲಿಯೂ ಪುರುಷ ಪ್ರಧಾನ್ಯ, ಪುರುಷ ಪರ ದೃಷ್ಟಿಕೋನ, ಸ್ತ್ರೀಯರ ಬಗ್ಗೆಗಿನ ಪೂರ್ವಾಗ್ರಹ ಪೀಡಿತ ಅಂಶಗಳೇ ಹೆಚ್ಚು ಕಣ್ಣಿಗೆ ರಾಚುವಂತಿರುತ್ತವೆ.

ಹಾಗಾಗಿ ವೈಜ್ಞಾನಿಕ-ವಿಮರ್ಶಾತ್ಮಕವಾಗಿ ನೋಡುವಂತಹ ಪತ್ರಿಕೆಯು ನಿರಂತರವಾಗಿ ಜನರೊಂದಿಗೆ ನಿಲ್ಲುವುದು ಅನಿವಾರ್ಯ.

ಸ್ತ್ರೀಯರನ್ನು ಎರಡನೆಯ ದರ್ಜೆಯ ಪ್ರಜೆಗಳಾಗಿ ನೋಡುವಂತಹ ಸಾಮಾಜಿಕ ಮೌಲ್ಯಗಳ ನಡುವೆ ಬದುಕು ಸಾಗಿಸುತ್ತಿರುವ ಸ್ತ್ರೀಯರು "ನಮ್ಮ ಮಾನಸ"ದಂತಹ ಪತ್ರಿಕೆಯ ಮೂಲಕ ಅಮಾನುಷತೆಯ ವಿರುದ್ಧ ದನಿ ಎತ್ತುವುದು ಸಾಧ್ಯವಾಗಿದೆ, ಇನ್ನು ಮುಂದೆಯೂ ಸಾಧ್ಯ ಮಾಡಬೇಕೆಂಬುದೇ ನಮ್ಮ ಆಶಯ. ಈ ಮೂಲಕ ನಮ್ಮ ಮಾನಸದ ಉದ್ದೇಶ ಮತ್ತು ಸಿದ್ಧಾಂತಗಳನ್ನು ಗಟ್ಟಿಗೊಳಿಸುವ ಪ್ರಯತ್ನವಷ್ಟೇ ನಮ್ಮದು.

ನಮ್ಮೆಲ್ಲರ ಈ ಪ್ರಾಮಾಣಿಕ ಪ್ರಯತ್ನಕ್ಕೆ, ನಿಮ್ಮ ಪ್ರೋತ್ಸಾಹ-ಚಿಲುಮೆಯ ನೀರೆರೆದು ಪೋಷಿಸುವಿರೆಂದು, ಆಶಿಸುತ್ತಾ ಸ್ವಾಯತ್ತತೆಯ ಹೊಸ ಚೈತನ್ಯದೊಂದಿಗೆ,

ಮಹಿಳಾ ದಿನಾಚರಣೆಯ ಶುಭಾಶಯಗಳೊಂದಿಗೆ,

**ಸಂಪಾದಕೀಯ ಬಳಗ**

## ಉತ್ತರದ ಹುಡುಕಾಟ



ನನ್ನ ಎದೆಯಂಗಳದಿ ಮೂಡಿದ
ಹೆಜ್ಜೆ ಗುರುತುಗಳು
ಕಾಳಗ ಮಾಡುತ್ತಲಿವೆ
ನಿರಂತರವಾಗಿ
ಸತ್ಯದ ಹುಡುಕಾಟದಲ್ಲಿದೆ
ಹೃದಯ

ಪ್ರೀತಿಯ ಆಪ್ತತೆ ತೋರಿದೆ
ಹೂ ಬಿಡುವ ಮುನ್ನ ಗಿಡ
ಮೊಗ್ಗು ಸಮೇತ ಕಮರಿತೇಕೆ?
ಕಮರಿ ಹೋದರೆ ಹೋಗಲಿ
ಮತ್ತೊಂದು ಪ್ರೀತಿಯ ಗಿಡ
ನೆಡಲಿಲ್ಲ

ಬದುಕಿನ ಪಯಣದಲ್ಲಿ
ಬರೀ ನೋವುಗಳೇ ತುಂಬಿರುವಾಗ
ಕತ್ತಲೆ ಎಲ್ಲೆಲ್ಲೂ ಮುತ್ತಿ
ನಗುತ್ತಿರುವಾಗ
ಹೊಸ ಬೆಳಕಿನ ಆಶಾ ಕಿರಣ ಬಯಸಿ
ಬದುಕುತಲಿರುವೆ ಸಾದಾ ಉತ್ತರಕ್ಕಾಗಿ
ರಾಮನಿಗಾಗಿ ಕಾದ ಶಬರಿಯಂತೆ.

■ *ರೇಣುಕಾ ದೇಗಲ್ಮಡಿ*



# ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕಾರ್ಮಿಕರ ಪರಿಸ್ಥಿತಿ

**▪ಪ್ರತಿಭಾ ಮತ್ತು ದು. ಸರಸ್ವತಿ**

*ಚಿತ್ರ ಕೃಪೆ:* **ಅಲೋಕ್ ಉತ್ಸವ್**

ಗ್ಯಾಪ್, ನೈಕಿ, ವಾಲ್ಮಾರ್ಟ್, ಲೀ, ಲೀವೈಸ್, ರ್‍ಯಾಂಗ್ಲರ್, ಪೀಟರ್ ಇಂಗ್ಲೆಂಡ್, . . . . . . . ಅತ್ಯಾಧುನಿಕ ಹಾಗೂ ಅತ್ಯಂತ ಶೋಕಿಯ ಸಿದ್ಧ ಉಡುಪುಗಳ ಮೇಲೆ ಅಂಟಿಸಲಾದ ಜಗದ್ವಿಖ್ಯಾತ ಬ್ರಾಂಡುಗಳ ಹೆಸರುಗಳಿವು. ಬ್ರಾಂಡಿನ ಹೆಸರು ನೀಡುವುದಕ್ಕಷ್ಟೇ ಆ ಕಂಪನಿಗಳು ಕೋಟ್ಯಂತರ ಡಾಲರುಗಳನ್ನು ಬಾಚಿಕೊಳ್ಳುತ್ತವೆ. ಕಾರಣ, ಈ ಬ್ರಾಂಡಿನ ಹೆಸರಿರುವ ಸಿದ್ಧ ಉಡುಪುಗಳು ಯಾವೂ ಸಾವಿರದೈನೂರಕ್ಕಿಂತ ಕಡಿಮೆಯಿಲ್ಲ. ಈ ಬ್ರಾಂಡಿನ ಹೆಸರಿನ ಉಡುಪು ತೊಡುವುದು ಶೋಕಿಯ ಸಂಕೇತವಷ್ಟೇ ಅಲ್ಲ, ಪ್ರತಿಷ್ಠೆಯ ಸಂಕೇತವೂ ಆಗಿದೆ. ಹಾಗಾಗಿ ಹೆಸರಿನ ಕಿಮ್ಮತ್ತಿಗೆ ಜನ ದುಡ್ಡು ತೆರುತ್ತಾರೆ. ಈ ಖ್ಯಾತಿಯ ಮೂಲವನ್ನು ಅರಸಿ ಹೊರಟರೆ ನಿಮಗೆ ಎದುರಾಗುವುದು ಬಡ ಮಹಿಳೆಯರ ಬವಣೆಯ ಬದುಕಿನ ಬಾಗಿಲುಗಳು.

ಅಮೇರಿಕಾ, ಯುರೋಪ್, ಆಸ್ಟ್ರೇಲಿಯಾ ಜಪಾನ್, – ಹೀಗೇ ಜಗತ್ತಿನಾದ್ಯಂತ ಮಾರಾಟವಾಗುವ ಸಿದ್ಧ ಉಡುಪುಗಳನ್ನು ಸಿದ್ಧಪಡಿಸುವವರು ಬೆಂಗಳೂರಿನ ಕೆಂಚೇನ ಹಳ್ಳಿ, ಗಂಗೊಂಡನ ಹಳ್ಳಿ, ಆವಲಹಳ್ಳಿ, ನಾಯಂಡ ಹಳ್ಳೀ, ಅರ್ಚಕರ ಹಳ್ಳೀ, ಬನ್ನಿಕುಪ್ಪೆ, ಬ್ಯಾಟರಾಯನಪುರಗಳಲ್ಲಿ ವಾಸವಾಗಿರುವ, ರತ್ನಮ್ಮ, ಮದೀನಾ, ನೇತ್ರ, ಸೌಮ್ಯಳಂತಹ ಮಹಿಳೆಯರು. ಬೆಂಗಳೂರಿನ ಈ ಮಹಿಳೆಯರು ದುಡಿಯುವುದು ಗೋಕಲ್‌ದಾಸ್ ಎಕ್ಸ್‌ಪೋರ್ಟ್ಸ್, ಬಾಂಬೆರೆಯಾನ್ ಫ್ಯಾಷನ್ಸ್ ಲಿ., ಟೆಕ್ಸ್‌ಪೋರ್ಟ್ಸ್ ಗ್ರೂಪ್ ಆಫ್ ಕಂಪನೀಸ್, ಶಾಹಿ ಎಕ್ಸ್‌ಪೋರ್ಟ್ಸ್‌ನಂತಹ ದೊಡ್ಡ ದೊಡ್ಡ ಹಲವಾರು ಕಂಪನಿಗಳ ಹಲವಾರು ಘಟಕಗಳಲ್ಲಿ ದುಡಿಯುತ್ತಾರೆ.

ಯಂತ್ರದೊಂದಿಗೆ ಯಂತ್ರದಂತೆಯೇ ದಿನವೊಂದಕ್ಕೆ 8–10 ಗಂಟೆಗಳ ಕಾಲ ಬಟ್ಟೆ ಹೊಲಿದರೆ ಸಿಗುವುದು ತಿಂಗಳಿಗೆ 2 ಪ್ಯಾಂಟಿನ ಬೆಲೆಯಷ್ಟು! ವಿವಿಧ ಅಳತೆಗೆ ತಕ್ಕಂತೆ ಕರಾರುವಾಕ್ಕಾಗಿ ಕತ್ತರಿಸಿ, ಜೋಡಿಸಿ, ಹೊಲಿಯುವವರು ಬಡ ಮಹಿಳೆಯರು. ನಮ್ಮ ಮಣ್ಣಿನಲ್ಲಿ ಬೆಳೆದ ಹತ್ತಿಯಿಂದ ನೂಲು ತೆಗೆದು ಬಟ್ಟೆ ಮಾಡಿ ಬಣ್ಣ ಹಾಕಿ ಪ್ರಿಂಟ್ ಮಾಡಿ ಕತ್ತರಿಸಿ ಹೊಲಿದು ಐರನ್ ಮಾಡಿ ಬೆಲೆ ಪಟ್ಟಿ ಅಂಟಿಸಿ, ಪ್ಯಾಕ್ ಮಾಡಿ ರಫ್ತಾಗಲು ಸಿದ್ಧ ಪಡಿಸುವವರು ಈ ನೆಲದ ದುಡಿಮೆಗಾರರು. ಬಳಸಲಾಗುವುದು ಈ ನಾಡಿನ ನೆಲ, ಜಲ, ವಿದ್ಯುತ್, ಸಾರಿಗೆ ಇತ್ಯಾದಿಯನ್ನು.

ಸಿದ್ಧ ಉಡುಪಿನಿಂದ ನಮ್ಮ ದೇಶಕ್ಕೆ ಸಿಗುವ ವಿದೇಶೀ ವಿನಿಮಯ 1 ಲಕ್ಷ ಕೋಟಿಗೂ ಅಧಿಕ. ಬೆಂಗಳೂರು ನಗರವೊಂದರಿಂದಲೇ ದೊರಕುವ ವಿದೇಶೀ ವಿನಿಮಯ ಹದಿನೈದು ಸಾವಿರ ಕೋಟಿಗಿಂತಲೂ ಅಧಿಕ. ಸಿದ್ಧ ಉಡುಪು ಉದ್ದಿಮೆಯ ಒಟ್ಟು ಆದಾಯದಲ್ಲಿ ಶೇ 25 ರಷ್ಟು ಸ್ಥಳೀಯ ಕಂಪನಿಗಳಿಗೆ ದೊರೆತರೆ ಉಳಿದ ಶೇ 75 ರಷ್ಟು ಸಲ್ಲುವುದು ಬ್ರಾಂಡ್‌ಗಳಿಗೆ. ಕಾರ್ಮಿಕರಿಗೆ ತಿಂಗಳಿಗೆ ಸಿಗುವ ವೇತನ ಮಾತ್ರ, 4500 ರಿಂದ 5000. ಸಿಗುವ ಬೋನಸ್ ಎಂದರೆ ಬೈಗುಳ, ಕಿರುಕುಳ, ಅಮಾನವೀಯ ಕೆಲಸದ ವಾತಾವರಣ.

ಬೆಂಗಳೂರು ನಗರ, ದೇಶದಲ್ಲಿಯೇ ಇಂದು ಅತಿದೊಡ್ಡ ಹಾಗೂ ಉತ್ತಮ ಗುಣಮಟ್ಟದ ಸಿದ್ಧ ಉಡುಪು ಉತ್ಪಾದನೆಯ ನಗರವೆಂದು ಗುರುತಿಸಿಕೊಂಡಿದೆ. ಇಲ್ಲಿ ಸಿದ್ಧವಾಗುವ ಉಡುಪುಗಳು, ಜಗತ್ತಿನಾದ್ಯಂತ ಇರುವ ಪ್ರಸಿದ್ಧ ಮಾರುಕಟ್ಟೆಗಳಿಗೆ ಮಾರಾಟವಾಗುತ್ತವೆ. ಕೆಲವು ಬೃಹತ್ ಕಂಪನಿಗಳು ವರ್ಷಕ್ಕೆ 100 ರಿಂದ 1000 ಕೋಟಿಗೂ ಹೆಚ್ಚು ವಹಿವಾಟು ನಡೆಸುತ್ತಿದ್ದು, 10 ರಿಂದ 30 ಸಾವಿರಕ್ಕೂ ಮೀರಿ ಕಾರ್ಮಿಕರಿಗೆ ಕೆಲಸ ನೀಡುತ್ತಿವೆ. ಉದ್ಯಮಕ್ಕೆ ಬರುತ್ತಿರುವ ಲಾಭಾಂಶವು ಎಲ್ಲ ರೀತಿ ಯಿಂದಲೂ ಗಣನೀಯವಾಗಿ ಹೆಚ್ಚಾಗುತ್ತಿದೆ.

ಈ ಉದ್ಯಮವು ಇಂದು ಬೆಂಗಳೂರು ನಗರ ಹಾಗೂ ಗ್ರಾಮಾಂತರ ಜಿಲ್ಲೆ, ಮೈಸೂರು ತುಮಕೂರು ಬಳ್ಳಾರಿ ಜಿಲ್ಲೆಗಳಲ್ಲಿ ಅತಿ ಹೆಚ್ಚು ಜನರಿಗೆ ಉದ್ಯೋಗ ಒದಗಿಸಿದೆ.

ಬೆಂಗಳೂರಿನಲ್ಲಿ ಸುಮಾರು 920 ಕಾರ್ಖಾನೆಗಳಿದ್ದು, ಸುಮಾರು 3.55 ಲಕ್ಷ ಕಾರ್ಮಿಕರು ದುಡಿಯುತ್ತಿದ್ದಾರೆ. ಪ್ರಸ್ತುತ ಅಂಕಿ ಅಂಶವನ್ನು ಲೆಕ್ಕ ಹಾಕಿದರೆ, ಈ ಕಾರ್ಮಿಕರ ಸಂಖ್ಯೆ ಸುಮಾರು 6 ಲಕ್ಷವಾಗುತ್ತದೆ.

ಈ ಉದ್ಯಮದಲ್ಲಿ ದುಡಿಯುತ್ತಿರುವವರು ಹೆಚ್ಚಿನವರು ಮಹಿಳೆಯ ರಾಗಿದ್ದು, ಉದ್ಯೋಗಕ್ಕಾಗಿ ಗ್ರಾಮೀಣ ಪ್ರದೇಶದಿಂದ ವಲಸೆ ಬಂದವರಾಗಿದ್ದಾರೆ. ಅವರಲ್ಲಿ ಹೆಚ್ಚಿನವರು ದಲಿತರು ಹಾಗೂ ಅಲ್ಪಸಂಖ್ಯಾತರು. ಈ ಮಹಿಳೆಯರಲ್ಲಿ, ಬಹುಪಾಲು ಮಂದಿ, ಏಕಾಂಗಿಯಾಗಿ ಕುಟುಂಬದ ಜವಾಬ್ದಾರಿಯನ್ನು ಹೊತ್ತಿದ್ದು, ತಮ್ಮ ಮೇಲೆ ಅವಲಂಬಿತರಾದ ಇತರ ಕುಟುಂಬ ಸದಸ್ಯರನ್ನು ನೋಡಿ ಕೊಳ್ಳುತ್ತಿದ್ದಾರೆ. ಈ ಕಾರ್ಮಿಕರೆಲ್ಲರಿಗೂ ಸರ್ಕಾರದಿಂದ ನಿಗದಿಯಾದ ಕನಿಷ್ಟವೇತನ ಮಾತ್ರ ದೊರೆಯುತ್ತಿದ್ದು, ಎಷ್ಟೋ ಕಾರ್ಖಾನೆಗಳು ಅದಕ್ಕಿಂತ ಕಡಿಮೆ ವೇತನವನ್ನು ನೀಡುತ್ತಿವೆ. ಜೊತೆಗೆ ಯಾವುದೇ ಹೆಚ್ಚುವರಿ ಭತ್ಯೆ ನೀಡದೆ 8 ಗಂಟೆಗಳಿಗಿಂತ ಹೆಚ್ಚಾಗಿ ಕಾರ್ಮಿಕರನ್ನು ದುಡಿಸಿಕೊಳ್ಳುತ್ತಿವೆ.

### ಕನಿಷ್ಟವೇತನದ ಪರಿಷ್ಕರಣೆ

ಉದ್ಯಮಕ್ಕೆ ಇಂದು ರೂ.157.00 ಕನಿಷ್ಠವೇತನ ನಿಗದಿಯಾಗಿದ್ದು, ಕೆಲವು ಕಾರ್ಖಾನೆಗಳಲ್ಲಿ ಅದಕ್ಕಿಂತ ಕಡಿಮೆ ವೇತನ ನೀಡಲಾಗುತ್ತಿದೆ.



(ಕನಿಷ್ಠವೇತನ ಕಾಯಿದೆಯ ಪ್ರಕಾರ ಗಾರ್ಮೆಂಟ್ಸ್ ಉದ್ಯಮ ಪ್ರತಿ 3 ರಿಂದ 5 ವರ್ಷದೊಳಗೆ ಪರಿಷ್ಕರಣೆಯಾಗಬೇಕು.) 2001 ರ ನಂತರ 2009 ರಲ್ಲಿ ಗಾರ್ಮೆಂಟ್ಸ್ ಉದ್ಯಮಕ್ಕೆ ಕನಿಷ್ಠವೇತನ ಪರಿಷ್ಕರಣೆ ಯಾಯಿತು. 2012ರ ಮಾರ್ಚ್‌ಗೆ 3 ವರ್ಷಗಳ ಅವಧಿ ಮುಗಿದು ಮತ್ತೊಮ್ಮೆ ಕನಿಷ್ಠವೇತನ ಪರಿಷ್ಕರಣೆಯ ಪ್ರಕ್ರಿಯೆಯನ್ನು ಸರ್ಕಾರ ಪ್ರಾರಂಭಿಸಬೇಕಿದೆ.

ಜೊತೆಗೆ ಗಾರ್ಮೆಂಟ್ಸ್ ಕಾರ್ಮಿಕರಿಗೆ ಒಂದು ಗೌರವಯುತ ಬದುಕು ನಡೆಸಲು ಕನಿಷ್ಠವೇತನವನ್ನು ಹೆಚ್ಚು ಮಾಡಬೇಕು ಎಂದು ಗಾಟು 2007 ರಿಂದ ನಿರಂತರವಾಗಿ ಆಗ್ರಹಿಸಿಕೊಂಡು ಬರುತ್ತಿದೆ. ಬೆಂಗಳೂರಿನಂತಹ ಮಹಾನಗರದಲ್ಲಿ ಏರಿರುವ ಬೆಲೆಗಳಲ್ಲಿ ಒಬ್ಬೊಂಟಿಯಾಗಿ ಕುಟುಂಬದ ಜವಾಬ್ದಾರಿಯನ್ನು ಹೊತ್ತಿರುವ ಮಹಿಳೆಯರು ಅತ್ಯಂತ ಕನಿಷ್ಠ ಮಟ್ಟದ ಜೀವನವನ್ನು ನಡೆಸುತ್ತಿದ್ದಾರೆ. ಮನೆಬಾಡಿಗೆ, ದಿನಸಿ, ಮಕ್ಕಳ ವಿದ್ಯಾಭ್ಯಾಸ, ಓಡಾಟದ ಖರ್ಚು, ಅನಾರೋಗ್ಯದ ಖರ್ಚು, ವರ್ಷಕ್ಕೊಮ್ಮೆ ಮನೆಮಂದಿಗೆಲ್ಲ ಬಟ್ಟೆ ಇಂತಹ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲು ಅವರಿಗೆ ದೊರೆಯುತ್ತಿರುವ ವೇತನದಲ್ಲಿ ಸಾಕಾಗದೆ ಪ್ರತಿ ತಿಂಗಳೂ ಸಾಲ, ಅದನ್ನು ತೀರಿಸಲು ತಮ್ಮ ಭವಿಷ್ಯನಿಧಿಯ ಬಳಕೆ, ಮತ್ತೆ ಹೊಸ ಕಾರ್ಖಾನೆಗೆ ಸೇರುವುದು ಹೀಗೇ ಅವರ ಜೀವನ ನಡೆಯುತ್ತಿದೆ. ಅಪಾರವಾಗಿ ಏರಿರುವ ಬೆಲೆಗಳೊಂದಿಗೆ ಮಹಾನಗರದಲ್ಲಿ ತಿಂಗಳಿಗೆ ಲಕ್ಷಾಂತರ ರೂ. ಸಂಪಾದಿಸುತ್ತಿರುವ ಐ.ಟಿ ಮಂದಿಯೊಂದಿಗೆ ಅನಿವಾರ್ಯವಾಗಿ ಪೈಪೋಟಿಗಿಳಿಯಬೇಕಾಗಿದೆ. ಇದು ಸಾಮಾಜಿಕ ಅಸಮಾನತೆಯನ್ನು ಇನ್ನೂ ಹೆಚ್ಚಿಸುತ್ತಿದೆ.

ಆದ್ದರಿಂದ ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಹಾಗೂ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ ಸಂಘಟನೆಗಳು, ಪ್ರಸ್ತುತ. ಗಾರ್ಮೆಂಟ್ಸ್ ಕಾರ್ಮಿಕರು ಗೌರವಯುತವಾಗಿ ಬದುಕಲು ಕನಿಷ್ಠವೇತನವನ್ನು ದಿನಕ್ಕೆ 300 ರೂ. ಬೇಕೆಂದು ಆಗ್ರಹಿಸುತ್ತಿದ್ದೇವೆ.

**ಶೋಷಣೆ ರಹಿತ ಕೆಲಸದ ವಾತಾವರಣ**

ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಮೇಲಾಧಿಕಾರಿಗಳು ಪುರುಷ ರಾಗಿದ್ದು, ಅವರ ಕೈ ಕೆಳಗೆ ದುಡಿಯುವ ಕಾರ್ಮಿಕರು ಮಹಿಳೆಯ ರಾಗಿದ್ದಾರೆ. ಇದರಿಂದ ಮಹಿಳೆಯರು ಕೆಲಸದ ಸ್ಥಳದಲ್ಲಿ ದಿನನಿತ್ಯ ಹಲವಾರು ರೀತಿಯಲ್ಲಿ ಶೋಷಣೆಗೊಳಗಾಗುತ್ತಿದ್ದಾರೆ. ಅತಿ ಹೆಚ್ಚು ಪ್ರೊಡಕ್ಷನ್ ನಿಗದಿ ಮಾಡಿ ಆ ಮೂಲಕ ಮಹಿಳಾ ಕಾರ್ಮಿಕರನ್ನು ಹಲವಾರು ರೀತಿಯಲ್ಲಿ ಶೋಷಣೆ ಮಾಡುತ್ತಿದ್ದಾರೆ, 8 ಗಂಟೆಗಿಂತ ಹೆಚ್ಚು ಪ್ರೊಡಕ್ಷನ್ ನಿಗದಿ ಮಾಡುವುದು, ಕಾನೂನು ಬದ್ಧ ರಜೆಯ ನಿರಾಕರಣೆ, ನಾಯಿ, ಕತ್ತೆ, ಗೂಬೆ ಎಂದು ಕಾರ್ಮಿಕರನ್ನು ಹೀಯಾಳಿಸುವುದು, ಬಟ್ಟೆಯನ್ನೇ ಮುಖದ ಮೇಲೆ ಎಸೆಯುವುದು, ಕೆಲಸ ಕೊಡದೆ ಎಲ್ಲರ ಮುಂದೆ ನಿಲ್ಲಿಸಿ ಅವಮಾನಿಸುವುದು, ರಜೆ ಹಾಕಿ ಬಂದ ಕಾರ್ಮಿಕರನ್ನು ಒಳಗೆ ಬಿಡದೆ ಕಾರ್ಖಾನೆಯ ಗೇಟ್ ಮುಂದೆ ಗಂಟೆಗಟ್ಟಲೇ ಕಾಯಿಸುವುದು, ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ, ಹೀಗೇ ಹಲವಾರು ರೀತಿಯಲ್ಲಿ ಮಹಿಳಾ ಕಾರ್ಮಿಕರು ತೊಂದರೆಗೊಳಗಾಗುತ್ತಿದ್ದಾರೆ.

ಕಾರ್ಮಿಕರು ಈ ಶೋಷಣೆಗಳನ್ನು ಎದುರಿಸಲಾಗದೆ, ಆತ್ಮಹತ್ಯೆ ಮಾಡಿಕೊಂಡ ಸಂದರ್ಭಗಳಿವೆ, ಮಾನಸಿಕವಾಗಿ ಅಸ್ವಸ್ಥರಾಗಿದ್ದಾರೆ, ಎಷ್ಟೇ ವರ್ಷ ಕೆಲಸ ಮಾಡಿದ್ದರೂ ಕೆಲಸ ಬಿಟ್ಟು ಹೊರನಡೆಯುತ್ತಾರೆ.

ಕೆಲಸದ ಸ್ಥಳದಲ್ಲಿ ಮಹಿಳೆಯರ ಮೇಲಾಗುವ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ಸುಪ್ರೀಂ ಕೋರ್ಟ್ ಗೈಡ್ ಲೈನ್ ಪ್ರಕಾರ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ವಿರೋಧಿ ಸಮಿತಿಗಳನ್ನು ರಚಿಸಬೇಕು. ಆದರೆ ಇದು ಕೇವಲ ದಾಖಲೆಗಳಲ್ಲಿ ಉಳಿದು ಸಮಿತಿಯು ಸಮರ್ಪಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಕೆಲವೊಂದು ಕಡೆಯಲ್ಲಿ ಈ ಸಮಿತಿಗಳು ಇಲ್ಲವೇ ಇಲ್ಲ, ಮತ್ತು ಇದ್ದರೂ ಅದರ ಬಗ್ಗೆ ಕಾರ್ಮಿಕರಿಗೆ ಯಾವ ಮಾಹಿತಿಯೂ ಇಲ್ಲ.

ಆದ್ದರಿಂದ ಪ್ರತಿಯೊಂದು ಕಾರ್ಖಾನೆಗಳಲ್ಲಿಯೂ ಸಹ ಈ ಸಮಿತಿಯು ಪರಿಣಾಮಕಾರಿಯಾಗಿ ಜಾರಿಯಾಗಬೇಕೆಂದು ನಾವು ಈ ಮೂಲಕ ಆಗ್ರಹಿಸುತ್ತಿದ್ದೇವೆ. ಅಲ್ಲದೆ ಕಾರ್ಮಿಕರ ಮೇಲೆ ನಡೆಯುತ್ತಿರುವ ಹಲವಾರು ರೀತಿಯ ದೌರ್ಜನ್ಯಗಳನ್ನು ತಡೆಗಟ್ಟಲು ಸೂಕ್ತ ಸಮಿತಿಗಳನ್ನು ರಚಿಸಬೇಕೆಂದು ಈ ಮೂಲಕ ಆಗ್ರಹಿಸುತ್ತೇವೆ.

**ಕ್ರಷ್**

ಗಾರ್ಮೆಂಟ್ಸ್‌ಗಳಲ್ಲಿ ದುಡಿಯುವ ಮಹಿಳೆಯರು ಬಹುಪಾಲು ಮಂದಿ ಕೆಲಸ ಅರಸಿ ಪರ ಊರುಗಳಿಂದ ಬಂದಿರುತ್ತಾರೆ. ಈ ಕಾರಣ ಮಕ್ಕಳನ್ನು ನೋಡಿಕೊಳ್ಳಲು ಕುಟುಂಬದಲ್ಲಿ ಸದಸ್ಯರಾರೂ ಇರುವುದಿಲ್ಲ, ಅವರಿಗೆ ಬರುವ ಕಡಿಮೆ ಸಂಬಳದಲ್ಲಿ ಮಕ್ಕಳಿಗೆ ಪ್ಲೇ ಹೋಂ ನಂತಹ ದುಬಾರಿ ವ್ಯವಸ್ಥೆ ಮಾಡಲು ಸಾಧ್ಯವಿಲ್ಲ, ಕಾರ್ಖಾನೆಗಳಲ್ಲಿ ಕ್ರಷ್ ಇರುವುದಿಲ್ಲ, ಕೆಲವೇ ಕಾರ್ಖಾನೆಗಳಲ್ಲಿ ಇದ್ದರೂ ಅಲ್ಲಿನ ವ್ಯವಸ್ಥೆ ಚೆನ್ನಾಗಿಲ್ಲ, ಇಂತಹ ಸಂದರ್ಭದಲ್ಲಿ ಮಕ್ಕಳನ್ನು ಒಬ್ಬರೇ ಮನೆಯ ಬಳಿ ಆಟವಾಡಿಕೊಂಡಿರಲು ಬಿಡಬೇಕು, ಇಲ್ಲವೇ ತಮ್ಮ ಹುಟ್ಟಿದೂರಿನಲ್ಲಿ ತಾಯಿಯ ಮನೆಯಲ್ಲಿ ಬಿಡಬೇಕು, ಇವೆರಡೇ ಈ ಮಹಿಳೆಯರಿಗೆ ಇರುವ ಅವಕಾಶಗಳು.



ಇಂದು ಬೆಂಗಳೂರಿನಲ್ಲಿ ಪುಟ್ಟ ಮಕ್ಕಳನ್ನು ಮನೆಯ ಬಳಿ ಆಟವಾಡಲು ಬಿಡುವುದೂ ಸಹ ಸುರಕ್ಷಿತವಿಲ್ಲ, ಉದಾಹರಣೆಗೆ ಈಗ್ಗೆ ಎರಡು ವರ್ಷಗಳ ಹಿಂದೆ ಸುಂಕದ ಕಟ್ಟೆಯಲ್ಲಿ ವಾಸಿಸುತ್ತಿದ್ದ ಮಹಿಳಾ ಕಾರ್ಮಿಕರ ಪುಟ್ಟ ಮಕ್ಕಳಿಬ್ಬರು ಮಧ್ಯಾಹ್ನ ಶೌಚಾಲಯಕ್ಕೆಂದು ಕೆರೆಯ ಬಳಿಗೆ ಹೋಗಿ ಮುಳುಗಿ ಸಾವನ್ನಪ್ಪಿದ್ದರು, ಮತ್ತೊಂದು ಘಟನೆಯಲ್ಲಿ, ತಾಯಿ ಕೆಲಸಕ್ಕೆ ಹೋದ ಸಂದರ್ಭದಲ್ಲಿ ಮನೆಯಲ್ಲಿದ್ದ 7 ಹಾಗೂ 5 ವರ್ಷದ ಪುಟ್ಟ ಮಕ್ಕಳಿಬ್ಬರು ಟಿ.ವಿ ಕಾರ್ಯಕ್ರಮವೊಂದನ್ನು ನೋಡುತ್ತಾ ಅದರಂತೆಯೇ ಬೆಂಕಿ ಹಚ್ಚಿಕೊಂಡು ಸುಟ್ಟು ಕರಕಲಾದ ಘಟನೆ ಎಂತಹವರ ಮನಸ್ಸನ್ನೂ ಕಲಕಿತ್ತು.

ಕಾನೂನಿನ ಪ್ರಕಾರ ಯಾವುದೇ ಕಾರ್ಖಾನೆಯಲ್ಲಿ 30 ಮಂದಿಗಿಂತ ಹೆಚ್ಚು ಮಹಿಳೆಯರಿದ್ದರೆ ಅಲ್ಲಿ 7 ವರ್ಷದವರೆಗೂ ಮಕ್ಕಳನ್ನು ನೋಡಿಕೊಳ್ಳಲು ಸುಸಜ್ಜಿತ ಕ್ರಷ್ ಇರಲೇಬೇಕು, ಅಲ್ಲಿ ತೊಟ್ಟಿಲಿರಬೇಕು, ಆಟಿಗೆಗಳಿರಬೇಕು, ಹೊತ್ತು ಹೊತ್ತಿಗೆ ಮಕ್ಕಳಿಗೆ ಹಾಲು ಬ್ರೆಡ್, ಊಟ ವಿತರಿಸಬೇಕು, ಹಾಲು ಕುಡಿಸುವ ತಾಯಂದಿರಿದ್ದರೆ ದಿನಕ್ಕೆ ಎರಡು ಸಾರಿ ಹಾಲು ಕುಡಿಸಲು ಬಿಡುವು ಕೊಡಬೇಕು, ತರಬೇತಿ ಪಡೆದ ಆಯಾ ಆ ಮಕ್ಕಳನ್ನು ನೋಡಿಕೊಳ್ಳಬೇಕು. ಇವೆಲ್ಲವೂ ಮಾಲೀಕರು ಕಡ್ಡಾಯವಾಗಿ ಪಾಲಿಸಲೇಬೇಕು.

ಆದರೆ ಇಂದು ಕೆಲವೇ ಕಾರ್ಖಾನೆಗಳು ಕ್ರಷ್ ವ್ಯವಸ್ಥೆಯನ್ನು ಹೊಂದಿವೆ. ಅವೂ ಸಹ ಸರಿಯಾಗಿ ಕೆಲಸ ನಿರ್ವಹಿಸುತ್ತಿಲ್ಲ. ಮಕ್ಕಳನ್ನು ನೋಡಿಕೊಳ್ಳಲು ತರಬೇತಿ ಹೊಂದಿರುವ ಆಯಾಗಳು ಇಲ್ಲ. ಕೆಲವೊಂದು ಕಾರ್ಖಾನೆಗಳಲ್ಲಿ ಕಸ ಗುಡಿಸುವ ಹಾಗೂ ಟೀ ಕಾಫಿ ಮಾಡುವ ಕೆಲಸಗಾರರನ್ನು ಮಕ್ಕಳನ್ನು ನೋಡಿಕೊಳ್ಳಲು ಬಿಡಲಾಗಿದೆ, ಕೆಲವೊಂದು ಕಾರ್ಮಿಕರ ಅನುಭವದಲ್ಲಿ ಮಕ್ಕಳಿಗೆ ನಿದ್ದೆ ಮಾತ್ರೆ ಹಾಕಿ ಮಕ್ಕಳನ್ನು ಯಾವಾಗಲೂ ಮಲಗಿಸಿರುತ್ತಾರೆ. ಕೆಲವೊಮ್ಮೆ ಜನರೇಟರ್ ರೂಮ್‌ನ ಪಕ್ಕದಂತಹ ಅಪಾಯಕಾರಿ ಸ್ಥಳಗಳಲ್ಲಿ ಈ ಕ್ರಷ್‌ಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಕೆಲವೊಂದು ಕಾರ್ಖಾನೆಗಳಲ್ಲಿ 15 ಮಕ್ಕಳಿಗಿಂತ ಹೆಚ್ಚು ಮಕ್ಕಳನ್ನು ಸೇರಿಸಿಕೊಳ್ಳುತ್ತಿಲ್ಲ, 1 ವರ್ಷದ ಮೇಲಿನ ಮಕ್ಕಳನ್ನು ಮಾತ್ರ ಸೇರಿಸಿಕೊಳ್ಳುತ್ತಿದ್ದಾರೆ.

ಕಾರ್ಖಾನೆಗಳಲ್ಲಿ ಕಾರ್ಮಿಕರ ಮಕ್ಕಳಿಗಾಗಿ ಉತ್ತಮ ಸೌಲಭ್ಯ ವಿರುವ ಕ್ರಷ್‌ಅನ್ನು ವ್ಯವಸ್ಥೆ ಮಾಡಿದಲ್ಲಿ, ಆ ಮೂಲಕ ದುಡಿಯುವ ತಾಯಂದಿರು ಆತಂಕ ರಹಿತರಾಗಿ ಕೆಲಸ ಮಾಡಲು ಸಾಧ್ಯವಾಗುತ್ತದೆ. ಆದ್ದರಿಂದ ಕಾರ್ಖಾನೆಗಳಲ್ಲಿ ಸೂಕ್ತ, ಸುಸಜ್ಜಿತ ಕ್ರಷ್‌ಗಳನ್ನು ವ್ಯವಸ್ಥೆ ಮಾಡಬೇಕೆಂದು ನಾವು ಈ ಮೂಲಕ ಆಗ್ರಹಿಸುತ್ತೇವೆ.

ಅವರ ನ್ಯಾಯಯುತ ಬೇಡಿಕೆಗಳಿಗಾಗಿ ಒತ್ತಾಯಿಸಿ, ಮಾರ್ಚ್ 8, ಅಂತಾರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಬೆಂಗಳೂರಿನ ಹಲವಾರು ಸಂಘಟನೆಗಳು ಹಾಗೂ ವ್ಯಕ್ತಿಗಳು "ಗಾರ್ಮೆಂಟ್ಸ್ ಮಹಿಳೆಯರಿಗಾಗಿ ನಾವು" ವೇದಿಕೆಯಡಿ, ಬೃಹತ್ ಜನಾಂದೋಲನಕ್ಕೆ ಚಾಲನೆ ನೀಡಲಿದ್ದಾರೆ.

❑

**ಆಂದೋಲನದ ಸಹಭಾಗಿ ಸಂಘಟನೆಗಳು/ವ್ಯಕ್ತಿಗಳು**

ವಿಮೋಚನಾ, ಮಾನಸ ಬಳಗ, ಹೆಂಗಸರ ಹಕ್ಕಿನ ಸಂಘ, ಸಮಾನತಾ ಮಹಿಳಾ ವೇದಿಕೆ, ಪರ್ಯಾಯ ಕಾನೂನು ವೇದಿಕೆ, ಡಾ. ವಿಜಯಾ, ದು.ಸರಸ್ವತಿ, ಹಿಂದ್ ಮಜ್ದೂರ್ ಕಿಸಾನ್ ಪಂಚಾಯತ್.

## ನಿಮ್ಮೊಂದಿಗೆ

ನಿಮ್ಮ ನೆನಪುಗಳು ಹಸಿಯಾಗಿ ನಮ್ಮ ಮುಂದಿವೆ
ಮಾಸದೆ ಹಾಗೇ ಉಳಿದಿರುವ ನಿಮ್ಮ ಹಸಿಯಾದ ಗಾಯಗಳಲ್ಲಿ
ಇರುವೆವು ನಾವು
ಇರುವೆವು ನಾವು

ಕೆಂಪು ರಕ್ತದ ಕಣ್ಣುಗಳಂತೆ
ಗುರಿ ಮುಟ್ಟಲು ವೇಗವನ್ನು ಹೆಚ್ಚಿಸಿದ ಬಾಣಗಳಂತೆ
ಹೃದಯದಲ್ಲಿನ ಅಗ್ನಿಜ್ವಾಲೆಯಂತೆ
ಸುಡುತ್ತಿರುವ ಪ್ರಶ್ನೆಗಳಂತೆ
ನಿಮ್ಮ ಗಾಯದ ಕಲೆಗಳಂತೆ
ಇವೆಲ್ಲವನ್ನು ವಿರೋಧಿಸುವುದಕ್ಕೆ
ಎಂದಿಗೂ ಮುಗಿಯದ
ನಿರಂತರವಾದ ಹಿಂಸೆಗಳಿಗೆ

ಎದುರಾಗಿ ನಿಲ್ಲುತ್ತೇವೆ
ಇಲ್ಲಿರುವೆವು ನಾವು
ಇಲ್ಲಿರುವೆವು ನಾವು

■ ನಿರ್ಮಲ ಕೆ.



# ಬಟ್ಟೆ ಬದಲಿಸಬಹುದು ಮನಸ್ಸಿನ ವಿಕಾರಗಳಿಗೇನು ಪರಿಹಾರ




■ ರೀಟಾ ರೀನಿ

ಮಂಗಳೂರಿನ ಬೆಜಾಯ್ ಚರ್ಚ್‌ನ ಧರ್ಮಗುರು ಫಾದರ್ ವಿಕ್ಟರ್ ಮಚಾಡೋ ಎಂಬುವವರು ದೇವಾಲಯಕ್ಕೆ ಬರುವ ಭಕ್ತರು. "ತೋಳಿಲ್ಲದ ಬಟ್ಟೆ ತೊಡಬಾರದು, ಪ್ರಚೋದನಕಾರಿ ಸಂದೇಶಗಳನ್ನು ಪ್ರಿಂಟ್ ಮಾಡಿರುವ ಟಿಷರ್ಟ್‌ಗಳನ್ನು ಹಾಕಬಾರದು ಮತ್ತು ತುಂಡು ಲಂಗ ಧರಿಸಬಾರದು" ಎಂಬ ಆದೇಶ ಹೊರಡಿಸಿದ್ದಾರೆ. ಇಂಥಾ ಆದೇಶ ಹೊರಡಿಸಿರುವುದು ಎಷ್ಟು ಸರಿ ಅಥವಾ ಇಲ್ಲ ಎಂಬ ಚರ್ಚೆಯನ್ನು ಸುವರ್ಣ ಸುದ್ದಿ ವಾಹಿನಿ ಕೈಗೆತ್ತಿಕೊಂಡು ಅದರಲ್ಲಿ ಪಾಲ್ಗೊಳ್ಳಲು ನನ್ನನ್ನು ಕರೆದರು. ಈ ಚರ್ಚೆಯಲ್ಲಿ ಶ್ರೀ ಸಂತೋಷ ಗುರೂಜಿ ಪಾಲ್ಗೊಂಡಿದ್ದರು. ಅಲ್ಲಿ ನಡೆಸಿದ ಚರ್ಚೆ ಮತ್ತು ಸಮಯಾಭಾವದಿಂದ ಹೇಳಲಾಗದೆ ಉಳಿದ ಕೆಲವು ವಿಷಯಗಳನ್ನು ಇಲ್ಲಿ ಚರ್ಚಿಸುತ್ತೇನೆ.

ಇತ್ತೀಚಿನ ದಿನಗಳಲ್ಲಿ ಹೆಣ್ಣುಮಕ್ಕಳ ಉಡುಪಿನ ವಿಚಾರ ಬಹಳ ದೊಡ್ಡ ಗಂಟಲಿನ ಚರ್ಚೆಯಾಗುತ್ತಾ ಇದೆ. ಅಮೆರಿಕಾದ ಟೊರಾಂಟೋ ನಗರದ ಪೋಲಿಸ್ ಅಧಿಕಾರಿ ಮೈಕಲ್ ಸ್ಯಾಂಗ್ವಿನೆಟ್ಟಿ ಎಂಬಾತ 'ಹೆಣ್ಣುಮಕ್ಕಳ ಮೇಲೆ ಆಗುವ ಅತ್ಯಾಚಾರಗಳನ್ನು ತಡೆಗಟ್ಟಬೇಕಾದರೆ ಅವರು ಪ್ರಚೋದನಕಾರಿಯಾಗಿ ಬಟ್ಟೆ ಧರಿಸುವುದನ್ನು ನಿಲ್ಲಿಸಬೇಕು' ಎಂದು ಮಾಡಿದ್ದ ಹೇಳಿಕೆಯ ಹಿನ್ನೆಲೆಯಲ್ಲಿ ಅಲ್ಲಿನ ಮಹಿಳೆಯರು ತಮ್ಮ ಮೇಲಿನ ದೌರ್ಜನ್ಯಕ್ಕೆ 'ತುಂಡುಡುಗೆ ಕಾರಣ' ಎಂದು ಸರಳೀಕರಿಸಿ ಹಾದಿ ತಪ್ಪಿಸುತ್ತಿರುವ ಬಗ್ಗೆ ದೊಡ್ಡ ಪ್ರತಿಭಟನೆಯನ್ನೇ ನಡೆಸಿದ್ದರು.

ಅಮೆರಿಕಾ ಪೋಲಿಸ್ ಅಧಿಕಾರಿಯ ಹೇಳಿಕೆ ಮತ್ತು ಅದಕ್ಕೆ ಬಂದ ವಿರೋಧ ವಿಶ್ವದ ಗಮನ ಸೆಳೆಯಿತು. ಅಮೆರಿಕಾದಂಥ ಮುಂದುವರಿದ ದೇಶದಲ್ಲಿ ಹೆಣ್ಣುಮಕ್ಕಳ ಉಡುಪಿನ ಬಗ್ಗೆ ಆದ ಈ ಪ್ರಸ್ತಾಪವನ್ನು ಭಾರತದ ಮನುವಾದಿ ಮನಸ್ಸುಗಳು ಗಕ್ಕನೆ ಹಿಡಿದುಕೊಂಡವು. ನೈತಿಕ, ಸಾಂಸ್ಕೃತಿಕ, ಭಾರತೀಯ ಮುಂತಾದ ವಿಶೇಷಣಗಳನ್ನು ಹಚ್ಚಿ ಹೆಣ್ಣು ಮಕ್ಕಳು ಧರಿಸುವ ಉಡುಪಿನ ಬಗ್ಗೆ ಒಂದು ನೀತಿ ಸಂಹಿತೆ ಜಾರಿಗೊಳಿಸಲು ಮುಂದಾಯಿತು.

ಮಹಿಳೆಯರ ಮೇಲೆ ಆಗುವ ವಿವಿಧ ಬಗೆಯ ಅತ್ಯಾಚಾರಕ್ಕೂ ಅವರು ಧರಿಸುವ ಉಡುಪಿಗೂ ಬಾಲಿಶ ಸಂಬಂಧ ಕಲ್ಪಿಸಲು ಪ್ರಾರಂಭಿಸಿತು. ಮಹಿಳೆಯರ ಮೇಲಿನ ಅತ್ಯಾಚಾರ ಪ್ರಕರಣಗಳು ಜಾಸ್ತಿಯಾಗಲು ಪ್ರಚೋದನಕಾರಿ ಉಡುಪು ಧರಿಸುವುದೇ ಕಾರಣ ಎಂದು ನಮ್ಮ ರಾಜಕಾರಣಿಗಳು ಹಲವು ಸಂದರ್ಭಗಳಲ್ಲಿ ಹೇಳಿಕೆಗಳನ್ನು ನೀಡುವುದು ಮುಂದುವರೆಯಿತು. ಎಲ್ಲೆಲ್ಲಿ ಸಾಧ್ಯವೋ, ಈ ವಿಚಾರವನ್ನು ಮತ್ತೆ ಮತ್ತೆ ಪ್ರಸ್ತಾಪಿಸಿ ಶತಶತಮಾನಗಳಿಂದಲೂ ನಡೆದುಕೊಂಡು ಬಂದಿರುವ ಸ್ತ್ರೀ ಸಂಕುಲದ ಶೋಷಣೆಯನ್ನು ಮುಂದುವರೆಸಲು ತುದಿಗಾಲಲ್ಲಿ ನಿಂತರು. ಇಂಥಾ ಒಂದು ಹುನ್ನಾರದ ಭಾಗವೇ ಈ ಚರ್ಚ್ ಪಾದ್ರಿಯ ಆದೇಶ ಕೂಡ.

ಹೆಣ್ಣುಮಕ್ಕಳು ಚರ್ಚ್ ಒಳಗೆ ತಲೆಯ ಮೇಲೆ ಬಟ್ಟೆ ಹಾಕಿಕೊಂಡು ತಲೆ ಬಾಗಿಯೇ ಇರಬೇಕು ಎಂಬ ಪರಿಕಲ್ಪನೆ ನಿನ್ನೆ ಮೊನ್ನೆಯದಲ್ಲ. 'ತಗ್ಗಿ ಬಗ್ಗಿ' ನಡೆಯಬೇಕೆನ್ನುವ ಆದೇಶ ರೂಪುಗೊಂಡದ್ದೇ ಸಂತ ಪೌಲನ ಶಾಸನಗಳಲ್ಲಿ. ಆಧುನಿಕತೆ, ವಿಜ್ಞಾನ, ತಂತ್ರಜ್ಞಾನ ಮತ್ತು ವಿಮರ್ಶಾತ್ಮಕ ದೃಷ್ಟಿಕೋನಗಳಿಂದಾಗಿ ಇದು ಒಂದಷ್ಟು ಬದಲಾಗಿದೆ. ಬೇರೆ ಬೇರೆ ಹಂತಗಳಲ್ಲಿ ಹೆಣ್ಣನ್ನು ಮಣಿಸಲೇಬೇಕು ಎಂಬ ಧೋರಣೆ ಮತ್ತು ಎಲ್ಲಾ ಅಪರಾಧಗಳಿಗೂ ಅವಳೊಬ್ಬಳೇ ಕಾರಣ ಎಂದು ಬಿಂಬಿಸುವ ಪ್ರಯತ್ನ ಕೂಡ ಈ 'ತುಂಡುಡುಗೆ'ಯ ಆರೋಪದಲ್ಲಿ ಕಾಣುತ್ತದೆ.



ಅತಿರೇಕದ ವಸ್ತ್ರ ವಿನ್ಯಾಸ ಯಾರಿಗಾದರೂ ಕಿರಿಕಿರಿ ಉಂಟು ಮಾಡುತ್ತದೆ ನಿಜ. ಹುಡುಗರು ಹತ್ತಿಪ್ಪತ್ತು ಜೇಬಿರುವ, ಅಲ್ಲಲ್ಲಿ ನೇತಾಡುತ್ತಿರುವ ಗೋಣಿಚೀಲದಂಥ ಪ್ಯಾಂಟುಗಳನ್ನು ಧರಿಸುವುದು, ಫ್ಯಾಶನ್ ಹೆಸರಿನಲ್ಲಿ ಕೂದಲು ಕೆದರಿ ಹುಚ್ಚರಂತೆ ಕಾಣುವುದು, ಇವು ಎಷ್ಟು ಕಿರಿಕಿರಿಯೋ ಹೆಣ್ಣುಮಕ್ಕಳ ಅತಿರಂಜಿತ ಉಡುಪುಗಳೂ ಅಷ್ಟೇ ಕಿರಿಕಿರಿ. ಆದರೆ ಹೆಣ್ಣುಮಕ್ಕಳು ಧರಿಸುವ ಬಟ್ಟೆಗಳು ಮಾತ್ರ 'ಪ್ರಚೋದನಕಾರಿ' ಎಂದು ಕರೆಯುವುದು ಗಂಡಸಿನ ಮರ್ಕಟ ಮನಸ್ಸಿನ ಅಭಿವ್ಯಕ್ತಿಯಲ್ಲದೆ ಬೇರೇನೂ ಅಲ್ಲ.

ಜೈನ ದಿಗಂಬರ ಸಮುದಾಯ ಸಂಪೂರ್ಣ ನಗ್ನರಾಗಿ ಓಡಾಡುತ್ತಾರೆ. ತರುಣ್‌ಜೀ ಎಂಬ ದಿಗಂಬರ ಮುನಿ ಸಾವಿರಾರು ಭಕ್ತರ ಎದುರು ಬೆತ್ತಲಾಗಿ ನಿಂತು ಪ್ರವಚನ ನೀಡುತ್ತಾರೆ. ಹಾಗಾದರೆ ಅದು ಪ್ರಚೋದನಕಾರಿಯೇ? ಅದನ್ನು

ಪ್ರಚೋದನಕಾರಿ ಎಂದು ಕರೆಯುವುದಾದರೆ, ಆ ಧರ್ಮದ ಆಳವಾದ ಸನ್ಯಾಸತ್ವದ ಪರಿಕಲ್ಪನೆಯನ್ನೇ ನಿರಾಕರಿಸಿ ದಂತಾಗುವುದಿಲ್ಲವೇ? ಅಕ್ಕಮಹಾದೇವಿಯ ವಸ್ತ್ರ ವಿಸರ್ಜನೆಯನ್ನು ಹೇಗೆ ನೋಡಬೇಕು?

ಹೆಣ್ಣುಮಕ್ಕಳ ಉಡುಪಿನ ಬಗ್ಗೆ ಚರ್ಚಿಸುವವರು ಅದ್ಯಾವುದೋ 'ಭಾರತೀಯ' ಎಂಬ ವಾದವನ್ನು ಬೇರೆ ಮುಂದಿಡುತ್ತಾರೆ. ಭಾರತೀಯ ಎನ್ನುವುದೇ ಬಹುತ್ವದಿಂದ ಕೂಡಿದ್ದು. ಇಲ್ಲಿ ನೂರಾರು ಬುಡಕಟ್ಟುಗಳು ಬಟ್ಟೆ ಧರಿಸದ ಸಂಸ್ಕೃತಿಯವು ಇವೆ. ರವಿಕೆ ಧರಿಸದ ಎಷ್ಟೋ ಹೆಣ್ಣುಮಕ್ಕಳಿದ್ದಾರೆ. ಅವರನ್ನು ಅವರಿರುವ ಹಾಗೆ ಗೌರವಿಸದೆ ನಮ್ಮ ಪ್ರಚೋದನೆಗೆ ಅವು ವಸ್ತು ಎಂದು ವಾದಿಸುವುದಾದರೆ, ರೋಗ ಇರುವುದು ಅದನ್ನು ನೋಡುವ ಮನಸ್ಸಿನಲ್ಲೇ ಹೊರತು, ಹಾಗೆ ವಸ್ತ್ರ ಧರಿಸುವವರಲ್ಲಲ್ಲ.

ಈ ಚರ್ಚೆಯಲ್ಲಿ ಪಾಲ್ಗೊಂಡಿದ್ದ ಶ್ರೀ ಸಂತೋಷ ಗುರೂಜಿಯವರು ಅನಾದಿಕಾಲದ ಸಂಸ್ಕೃತಿಯನ್ನು ಪ್ರಸ್ತಾಪಿಸುತ್ತಾ 'ಹೆಣ್ಣು, ಹೊನ್ನು, ಮಣ್ಣು' ಪರಿಕಲ್ಪನೆಯನ್ನು ಮುಂದಿಡುತ್ತಾರೆ. ಈ ಮೂರು ಪದಗಳಲ್ಲಿ ಎರಡು ಭೌತಿಕ ವಸ್ತುಗಳು. ಈ ಭೌತಿಕ ವಸ್ತುಗಳ ಸಾಲಿನಲ್ಲಿ 'ಹೆಣ್ಣು' ಎಂಬುದು ಒಂದು ವಸ್ತುವಾಗಿ ಮೊದಲು ಪ್ರಸ್ತಾಪವಾಗುತ್ತದೆ. ಅವರ ಈ ಮಾತಿಗೆ ನನ್ನ ಧಿಕ್ಕಾರವನ್ನು ಸ್ಪಷ್ಟವಾಗಿ ದಾಖಲಿಸುತ್ತೇನೆ. ಹೆಣ್ಣನ್ನು ಒಂದು ಸಹಜೀವಿಯಾಗಿ ಪರಿಗಣಿಸುವ ಬದಲು ಇವತ್ತು ಕೂಡ, ಈ 21 ಶತಮಾನದಲ್ಲೂ ಇಂಥಾ ಗುರುಗಳು ಆಕೆಯನ್ನು ಒಂದು ವಸ್ತುವಿನೊಂದಿಗೆ ಸಮಾನವಾಗಿ ನೋಡುತ್ತಾರೆ ಎಂದರೆ, ಅದು ಹೆಣ್ಣಿನ ಘನತೆಗೆ ಕೊಡಬಹುದಾದ ಬಹುದೊಡ್ಡ ಪೆಟ್ಟು.

ಚಾರಿತ್ರಿಕವಾಗಿ ಒಬ್ಬ ಹೆಣ್ಣುಮಗಳ ವ್ಯಕ್ತಿತ್ವವನ್ನು ಸಾಮಾಜಿಕ ಅಗತ್ಯಗಳಿಗೆ ಬಗ್ಗಿಸಲಾಗಿದೆ ಎಂಬುದು ಯಾರೂ ನಿರಾಕರಿಸಲಾಗದ ಮಾತು. ಈ ಧೋರಣೆಯಿಂದ ಸಿಡಿದು ಸ್ವತಂತ್ರ ಅನನ್ಯತೆ ಕಟ್ಟಿಕೊಳ್ಳುವಾಗಲೆಲ್ಲಾ ಇಂಥ ಪ್ರತಿರೋಧಗಳು ಎದುರಾಗುತ್ತವೆ. ಪ್ರಚೋದನಕಾರಿ ಉಡುಪು ಧರಿಸುವುದರಿಂದ ಲೈಂಗಿಕ ದೌರ್ಜನ್ಯಗಳು ಹೆಚ್ಚಾಗಿವೆ ಎಂಬ ಮಾತನ್ನು ಸಹಜ ಎಂಬಂತೆ ಬಿಂಬಿಸುವ ಕಸರತ್ತು ನಡೆಯುತ್ತಿದೆ. ಆದರೆ ವಾಸ್ತವದಲ್ಲಿ ಇದು ನಿರಾಧಾರವಾದುದು. ಲೈಂಗಿಕ ಕಿರುಕುಳಕ್ಕೆ ಒಳಗಾಗುವ ಬಹುಪಾಲು ಹೆಣ್ಣುಮಕ್ಕಳು ತುಂಡುಡುಗೆ ಧರಿಸುವವರಲ್ಲ. ಇತ್ತೀಚೆಗೆ ಬೆಂಗಳೂರಿನ ಪಾದ್ರಿಯೊಬ್ಬರು ಶಾಲೆಯ ಹೆಣ್ಣುಮಕ್ಕಳನ್ನು ಲೈಂಗಿಕ ದೌರ್ಜನ್ಯಕ್ಕೆ ಬಳಸಿಕೊಂಡದ್ದನ್ನು ಹೇಗೆ ವಿವರಿಸಿಕೊಳ್ಳುವುದು? ಶಿಕ್ಷಕರು ಅಪ್ರಾಪ್ತ ಹೆಣ್ಣುಮಕ್ಕಳ ಮೇಲೆ ಅನೇಕ ಬಾರಿ ಲೈಂಗಿಕ ದೌರ್ಜನ್ಯ ಎಸಗಿರುವುದಕ್ಕೆ ಯಾವ ಪ್ರಚೋದನೆ ಕಾರಣ? ಮನೆಗಳಲ್ಲಿ ಒಚಿಟಿ ಮಹಿಳೆಯರ ಮೇಲೆ ಆಗುವ ಅತ್ಯಾಚಾರಕ್ಕೆ ಏನು ವಿವರಣೆ ಕೊಡಬಹುದು? ನಾಲ್ಕು ವರ್ಷದ, ಐದು ವರ್ಷದ ಅಪ್ರಾಪ್ತ ವಯಸ್ಸಿನ ಮಕ್ಕಳ ಮೇಲೆ ಆಗುವ ದೌರ್ಜನ್ಯಕ್ಕೆ ಯಾವುದು ಹೊಣೆ? ಮನೆಗಳಲ್ಲೇ ಹತ್ತಿರದ ಸಂಬಂಧಿಕರು, ಅಕ್ಕಪಕ್ಕದವರಿಂದ ಲೈಂಗಿಕ ಶೋಷಣೆಗೆ ಒಳಗಾಗುವ ಹೆಣ್ಣುಮಕ್ಕಳು ಎಂಥಾ ಪ್ರಚೋದನಕಾರಿ ಉಡುಪು ಧರಿಸಿದ್ದಿರಬಹುದು? ಕಣ್ಣೊಂದನ್ನು ಬಿಟ್ಟು ದೇಹದ ಉಳಿದೆಲ್ಲ ಭಾಗವನ್ನು ಭದ್ರವಾಗಿ ಬುರ್ಕಾ ಒಳಗೆ ಮುಚ್ಚಿಕೊಳ್ಳುವ ಮುಸ್ಲಿಮ್ ಹೆಣ್ಣುಮಕ್ಕಳ ಮೇಲೂ ದೌರ್ಜನ್ಯಗಳು ನಡೆಯುತ್ತಿವೆ. ಇದಕ್ಕೆ ಏನು ಪ್ರಚೋದನೆ?

ಇತ್ತೀಚೆಗೆ ಹೆಣ್ಣುಮಕ್ಕಳು ತಮ್ಮ ಘನತೆಯನ್ನು ಕಾಪಾಡಿಕೊಳ್ಳುವ ಸಂಘರ್ಷದಲ್ಲಿ ತೊಡಗಿದ್ದಾರೆ. ಒಂದು ಸಮಾಜದ ಸಿದ್ಧಧೋರಣೆಯ ವಿರುದ್ಧ ಆಕ್ರೋಶ ವ್ಯಕ್ತವಾಗುತ್ತಿದೆ. ಈ ಹಿನ್ನೆಲೆಯಲ್ಲಿ 'ನೈತಿಕತೆ,' 'ಸಂಸ್ಕೃತಿ'ಯ ಹೆಸರಿನಲ್ಲಿ ಹೆಣ್ಣುಮಕ್ಕಳ ಬೆಳವಣಿಗೆಯನ್ನು ಮತ್ತೆ ಮತ್ತೆ ನಿಯಂತ್ರಿಸುವ ಎಲ್ಲಾ ಪ್ರಯತ್ನಗಳು ನಡೆಯುತ್ತಿವೆ. ಹಾಗಾಗಿಯೇ ಆಧುನಿಕ ಉಡುಗೆ ಧರಿಸುವ ಹೆಣ್ಣುಮಕ್ಕಳ ಬಗ್ಗೆ ಒಂದು ಆಗೋಚರ ಭಯ ಇರುವುದೂ ಕಾಣುತ್ತದೆ. ಸೆರಗು ಜಾರುತ್ತದೆ, ನೆರಿಗೆ ಬೀಳುತ್ತದೆ ಎಂಬ ಭಯವಿಲ್ಲದೆ ಧೈರ್ಯವಾಗಿ ಕೈಕಾಲು ಆಡಿಸಿ ಒದ್ದುಹೋಗುವವರ ಸಂಖ್ಯೆ ಹೆಚ್ಚಾಗುತ್ತದೆ ಎಂಬ ಕಾರಣಕ್ಕೆ ಧೈರ್ಯವಂತ ಹೆಣ್ಣುಮಕ್ಕಳ ಸಂಖ್ಯೆಯನ್ನು ನಿಯಂತ್ರಿಸುವ ಹುನ್ನಾರ ಇದರಲ್ಲಿ ಅಡಗಿರುವುದನ್ನು ನಾವು ಗಮನಿಸಬೇಕು.

ಚರ್ಚೆಗೆ ಬರುವ ಹೆಣ್ಣುಮಕ್ಕಳ ಉಡುಪಿನ ಬಗ್ಗೆ ಆದೇಶ ಹೊರಡಿಸಿರುವ ವಿಚಾರಕ್ಕೆ ಮರಳೋಣ. ಹೆಣ್ಣುಮಕ್ಕಳ ವಸ್ತ್ರಸಂಹಿತೆಯ ಬಗ್ಗೆ ಭಾರತದಲ್ಲಷ್ಟೇ ಅಲ್ಲ ಅಮೆರಿಕಾ ಚರ್ಚಿನಲ್ಲೂ ಸಾಕಷ್ಟು ಚರ್ಚೆಗಳು ನಡೆದಿವೆ. ಶ್ರೀಲಂಕಾದ ಕೊಲಂಬೋ ಚರ್ಚ್ ಒಂದರ ಮುಖ್ಯದ್ವಾರದಲ್ಲೇ ಹೆಣ್ಣುಮಕ್ಕಳ ವಸ್ತ್ರಸಂಹಿತೆಯನ್ನು ಫೋಟೋ ಹಾಕಿ ವಿವರಿಸಿದ್ದರು. ಪೋರ್ಚುಗೀಸರ ಪ್ರಭಾವಕ್ಕೆ ಒಳಗಾಗಿ ಕ್ರೈಸ್ತರಾದ ಮಂಗಳೂರು ಮತ್ತು ಗೋವಾ ಹೆಣ್ಣುಮಕ್ಕಳಿಗಾಗಲಿ ಶ್ರೀಲಂಕಾ ಹೆಣ್ಣುಮಕ್ಕಳಿಗಾಗಲಿ ಅರ್ಧ ಲಂಗ ಧರಿಸುವುದು ಹೊಸ ವಿಚಾರವಲ್ಲ. ಸ್ಕರ್ಟ್, ಫ್ರಾಕ್ ಅವರ ಉಡುಗೆಯ ಒಂದು ಭಾಗವೇ ಆಗಿದೆ. ಹಾಗಿರುವಾಗ ಇದ್ದಕ್ಕಿದ್ದಂತೆ ಈ ಉಡುಪುಗಳು ಪ್ರಚೋದನಕಾರಿ ಎಂಬ ಜ್ಞಾನೋದಯ ಈ ಪಾದ್ರಿಗೆ ಏಕೆ ಆಯಿತು ಎಂಬ ವಿವರ ಹುಡುಕಬೇಕಾಗುತ್ತದೆ.

ಇತ್ತೀಚೆಗೆ ಬೆಂಗಳೂರಿಗೆ ಹತ್ತಿರವಿರುವ ಗ್ರಾಮದ ದೇವಾಲಯದಲ್ಲಿ ಸುಮಾರು 6 ವರ್ಷ ವಯಸ್ಸಿನ ಹುಡುಗಿ ಟೂ ಪೀಸ್ ಡ್ರೆಸ್ ಹಾಕಿಕೊಂಡು ಚರ್ಚ್‌ಗೆ ಬಂದಿತ್ತು. ಆ ಡ್ರೆಸ್‌ನ ವಿನ್ಯಾಸ ಹೇಗಿತ್ತೆಂದರೆ ಸ್ವಲ್ಪ ಹೊಟ್ಟೆ ಕಾಣಿಸುವಷ್ಟು. ಅಲ್ಲಿರುವ 71 ವರ್ಷದ ಪಾದ್ರಿ ಆ ಹುಡುಗಿಯನ್ನು ಕರೆದು, 'ಹೋಗಿ ಬಟ್ಟೆ ಬದಲಾಯಿಸಿಕೊಂಡು ಬಾ' ಎಂದು ಚರ್ಚ್‌ನಿಂದ ಹೊರಗೆ ಕಳಿಸಿದ್ದಾರೆ. ಬಟ್ಟೆಯೇ ಇಲ್ಲದೆ ಓಡಾಡಬಹುದಾದ ಮುಗ್ಧ ವಯಸ್ಸಿನ ಮಗು ಅದು. ಅಂಥಾ ಮಗು ಕೂಡ ತಾನು ಧರಿಸುವ ಬಟ್ಟೆಯಿಂದ ಪ್ರಚೋದಿತವಾಗಬಹುದು ಎಂದಾದರೆ ಮನಸ್ಸುಗಳು ಎಷ್ಟು ಕೊಳೆತು ನಾರುತ್ತಿರಬೇಕು ಯೋಚಿಸಿ.



ಚರ್ಚ್‌ನ ಆಚೆಗೂ ಒಂದು ಬದುಕಿದೆ ಎಂಬುದನ್ನು ಎಲ್ಲಾ ಗುರುಗಳು, ಮಠಾಧೀಶರು ಅರಿಯಬೇಕು. ಪ್ರಚೋದನಕಾರಿ ಉಡುಪುಗಳನ್ನು ಬದಲಾಯಿಸಿ ಕೊಳ್ಳಬೇಕು ಎಂದು ಆದೇಶಿಸುವವರು, ಹಾಗೆ ಪ್ರಚೋದಿತಗೊಳ್ಳುವ ವಿಕೃತ ಮನಸ್ಸಿನ ಬದಲಾವಣೆಗೆ ಎಂದಾದರೂ ಪರಿಹಾರವನ್ನು ಸೂಚಿಸಿದ್ದಾರೆಯೇ? ❑

# ಮಹಿಳೆಯರ ಪಾಲಿಗೆ ಸತ್ತಂತೆ ಮಲಗಿರುವ

*ಈ ನೆಲದಲ್ಲಿ ಹೆಣ್ಣು ತುಳಿಯಲ್ಪಡುತ್ತಿದ್ದರೆ*
*ಅವಮಾನಿಸಲ್ಪಡುತ್ತಿದ್ದರೆ*
*ನಿಮ್ಮೆದೆಯ ಮೇಲೆ ಕೈಯಿಟ್ಟು ಹೇಳಿ*
*ಈ ದೇಶ ಸ್ವತಂತ್ರವೇ?*

*(ಮಹಿಳಾ ಚಳುವಳಿಯ ಒಂದು ಹಾಡು)*

ಅಂತರರಾಷ್ಟ್ರೀಯ ದುಡಿವ ಮಹಿಳಾ ದಿನಾಚರಣೆಯು ಶತಮಾನೋತ್ಸವವನ್ನು ಪೂರೈಸಿದೆ. ಒಂದು ಶತಮಾನಕ್ಕೂ ಹಿಂದೆ ಕೆಲಸದ ಸ್ಥಳದಲ್ಲಿ ಮೂಲಭೂತ ಹಕ್ಕುಗಳು ಹಾಗೂ ತಮ್ಮ ಬದುಕುವ ಹಕ್ಕಿಗಾಗಿ ಮಹಿಳಾ ಕಾರ್ಮಿಕರು ಚಳುವಳಿ ಆರಂಭಿಸಿದರು. ಬರಬರುತ್ತಾ ಶೋಷಣೆಗೊಳಗಾಗುತ್ತಿರುವ ಎಲ್ಲ ಮಹಿಳೆಯರ ಚಳುವಳಿಯಾಗಿ ಇದು ಮಾರ್ಪಟ್ಟಿತು. ಹೀಗೆ, ದಶಕಗಳ ಕಾಲ ಮಹಿಳೆಯರು ಚಿಕ್ಕ-ದೊಡ್ಡ ಮಟ್ಟದಲ್ಲಿ, ಎಲ್ಲ ರೀತಿಯಲ್ಲೂ ನಡೆಸಿದ ಹೋರಾಟಗಳ, ಪ್ರಯತ್ನಗಳ ಫಲವಾಗಿ ಮಹಿಳೆಯರಿಗೆ ಕೆಲವಾದರೂ ಹಕ್ಕುಗಳು ದೊರೆತಿವೆ. ದಮನಿತರಲ್ಲಿ ದಮನಿತರಾದ ಮಹಿಳೆಯರ ಅಭಿವೃದ್ಧಿಗಾಗಿ ಸರ್ಕಾರ ಶ್ರಮಿಸಬೇಕು ಎಂಬುದು ಈಗಾಗಲೇ ಒಪ್ಪಿತವಾಗಿರುವ ಸತ್ಯವಾಗಿದೆ.

ಆದರೆ, ಇತ್ತೀಚಿನ ವರ್ಷಗಳಲ್ಲಿ ನಡೆಯುತ್ತಿರುವುದೇನು? ಎಲ್ಲಾ ಸರ್ಕಾರಗಳಿಗೂ ಮಹಿಳಾ ಸಬಲೀಕರಣ ಎಂಬುದು ಮಹಿಳೆಯರ ಕಣ್ಣಿಗೆ ಮಣ್ಣೆರಚುವ ಅಸ್ತ್ರವಾಗಿ ಪರಿಣಮಿಸಿದೆ. ಮಹಿಳೆಯರ ಹೆಸರಿನಲ್ಲಿ ಹುಟ್ಟುತ್ತಿರುವ ಸರ್ಕಾರಿ ಯೋಜನೆಗಳಾಗಲೀ, ಸಂಸ್ಥೆಗಳಾಗಲೀ ನಿಜವಾದ ಅರ್ಥದಲ್ಲಿ ಮಹಿಳೆಯರ ಹಿತಕಾಯುತ್ತಿಲ್ಲ; ಅವರನ್ನು ಸಬಲರನ್ನಾಗಿ ಮಾಡುತ್ತಿಲ್ಲ. ಮಹಿಳಾ ಚಳುವಳಿಯ ಒತ್ತಡದ ಫಲವಾಗಿ ಸ್ಥಾಪಿಸಲಾದ ಮಹಿಳಾ ಆಯೋಗವನ್ನೂ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯನ್ನೂ ನೋಡಿದರೆ ಈ ಮಾತು ಸ್ಪಷ್ಟವಾಗಿ ಅರಿವಿಗೆ ಬರುತ್ತದೆ.

ಎಲ್ಲಾ ಸರ್ಕಾರಗಳೂ ಮಹಿಳಾ ಆಯೋಗವನ್ನು 'ಆಟಕ್ಕುಂಟು ಲೆಕ್ಕಕ್ಕಿಲ್ಲ' ಎಂಬಂತೆಯೇ ಪರಿಗಣಿಸುತ್ತಿವೆ. ನಡುನಡುವೆ ಎಲ್ಲೋ ಸಣ್ಣ ಕಾಲಾವಧಿಗೆ ಬಿಟ್ಟರೆ ಆಯೋಗ ಸಕ್ರಿಯವಾಗಿ ನಿಜಕ್ಕೂ ಮಹಿಳೆಯರಿಗೆ ನೆರವಾಗಿ ಇದ್ದದ್ದೇ ಕಡಿಮೆ. ಒಂದು ವರ್ಷದ ಹಿಂದಿನವರೆಗೂ ಬಹಳ ಕಾಲ ಅದಕ್ಕೊಬ್ಬರು ಅಧ್ಯಕ್ಷರೂ ಇಲ್ಲದೆ, ಇದ್ದೂ ಸತ್ತಂತಿತ್ತು. ಈಗ ಅಧ್ಯಕ್ಷರ ನೇಮಕಾತಿಯ ನಂತರವೂ ಅದರ ಸ್ಥಿತಿಯೇನೂ ಬದಲಾಗಿಲ್ಲ.

ಕರ್ನಾಟಕದಲ್ಲಿ ಪೌರಕಾರ್ಮಿಕರ ಪರಿಸ್ಥಿತಿ ಅತ್ಯಂತ ದಾರುಣವಾಗಿದೆ. ದಕ್ಷಿಣ ಭಾರತದ ಬೇರಾವುದೇ ರಾಜ್ಯಗಳಲ್ಲೂ ಇಲ್ಲದ ಕೇವಲ 2000–2500 ಬಿಡಿಗಾಸಿಗೆ ಬೆಂಗಳೂರು ಮಹಾನಗರ ಪಾಲಿಕೆಯ ಅಡಿಯಲ್ಲಿ ಗುತ್ತಿಗೆ ಪೌರಕಾರ್ಮಿಕರು ದುಡಿಯುತ್ತಿದ್ದಾರೆ. ಇದರಲ್ಲಿ ಶೇ. 90ರಷ್ಟು ಮಹಿಳೆಯರಿದ್ದು, ದಮನಿತ ಸಮುದಾಯಕ್ಕೆ ಸೇರಿರುವ ಕಾರಣಕ್ಕೂ, ಮಹಿಳೆಯರಾದ ಕಾರಣಕ್ಕೂ ಇವರು ದುಪ್ಪಟ್ಟು ಶೋಷಣೆಗೆ ಒಳಗಾಗುತ್ತಿದ್ದಾರೆ. ಕಳೆದ ಹಲವು ವರ್ಷಗಳಿಂದಲೂ ತಮ್ಮ ನ್ಯಾಯಬದ್ಧ ಹಕ್ಕುಗಳಿಗಾಗಿ ಹೋರಾಡುತ್ತಿರುವ ಪೌರಕಾರ್ಮಿಕ ಮಹಿಳೆಯರು, ಈ ಒಂದು ವರ್ಷದಲ್ಲಂತೂ ನಿರಂತರವಾಗಿ ಪ್ರತಿಭಟನೆಗಳಲ್ಲಿ ತೊಡಗಿದ್ದಾರೆ. ಆದರೆ ಈ ಮಹಿಳೆಯರ ಕೂಗು ಮಹಿಳಾ ಆಯೋಗದ 'ಜಾಣ ಕಿವುಡು' ಕಿವಿಗೆ ತಲುಪುತ್ತಿಲ್ಲ.

ಕೃಷಿ ಕೂಲಿ, ಗಾರ್ಮೆಂಟ್ಸ್, ಕಟ್ಟಡ ಕೆಲಸ, ಮನೆಕೆಲಸ ಮೊದಲಾದ ಕ್ಷೇತ್ರಗಳು ಹೆಚ್ಚು ಕಡಿಮೆ ಸಂಪೂರ್ಣವಾಗಿ ಮಹಿಳೆಯರ ದುಡಿಮೆಯನ್ನೇ ಆಧರಿಸಿವೆ. ದಿನದಿನಕ್ಕೆ ಇಲ್ಲಿ ದುಡಿಯುತ್ತಿರುವ ಮಹಿಳೆಯರ ಸಂಖ್ಯೆ, ಅಸಂಘಟಿತ ಮಹಿಳಾ ಕಾರ್ಮಿಕರ ಸಂಖ್ಯೆ ಹೆಚ್ಚಾದಂತೆ ಕೂಲಿ ಹೆಚ್ಚುತ್ತಿಲ್ಲ; ಬದಲಿಗೆ ಏರುತ್ತಿರುವ ಜೀವನಮಟ್ಟಕ್ಕೆ ಹೋಲಿಸಿದರೆ ಕೂಲಿಯ ಪ್ರಮಾಣ ಇಳಿಯುತ್ತಲೇ ಇದೆ. ಮಹಿಳೆಯರ ಶ್ರಮ ಮತ್ತು ಅದರ ಪ್ರತಿಫಲದ ವಿಚಾರ ಬಂದಾಗ ಅಗಾಧವಾದ ಅಂತರ ಎದ್ದು ಕಾಣುತ್ತದೆ. ಇಂತಹ ದೈಹಿಕ ದುಡಿಮೆಯಲ್ಲಿ ಪುರುಷರಿಗೆ ಸಿಗುವ ಕೂಲಿಯೇ ಅತ್ಯಂತ ಕಡಿಮೆ ಎನ್ನಿಸುವಾಗ, ಅದರಲ್ಲಿ ಅರ್ಧದಷ್ಟು ಕೂಲಿ ಮಾತ್ರ ಪಡೆಯುವ ಮಹಿಳೆಯರ ಶ್ರಮದ ಶೋಷಣೆ ಊಹಿಸಲಸಾಧ್ಯ.


ಚಿತ್ರ ಕೃಪೆ: ಚಂದನ್ ಯಾದವ್

# ...ರ್ಗರವನ್ನು ಬಡಿದೆಬ್ಬಿಸುವ ತಮಟೆ ಚಳುವಳಿ

ಆರ್ಥಿಕ ಕ್ಷೇತ್ರ ಮಾತ್ರವಲ್ಲ, ಸಾಮಾಜಿಕ ಮತ್ತು ಕೌಟುಂಬಿಕ ಕ್ಷೇತ್ರಗಳಲ್ಲೂ ಮಹಿಳೆಯರ ಮೇಲಿನ ದೌರ್ಜನ್ಯಗಳು ಹಲವು ಪಟ್ಟು ಹೆಚ್ಚಿವೆ. ಕರ್ನಾಟಕದಲ್ಲಿ ಹಿಂದೆಂದೂ ಬೆಳಕಿಗೆ ಬರದಿದ್ದ, ತಂದೆಯೇ ಮಗಳನ್ನು ಅಂತರ್ಜಾತಿ ಪ್ರೇಮದ ಕಾರಣಕ್ಕಾಗಿ ಕೊಂದಂತಹ ಅಮಾನುಷ ನರಹತ್ಯೆಯ ಪ್ರಕರಣ ಜನವರಿ ತಿಂಗಳಲ್ಲಿ ಸುದ್ದಿಯಾಯಿತು. ರಾಜ್ಯದ ಎಲ್ಲಾ ಭಾಗದಿಂದಲೂ ಇದಕ್ಕೆ ಮಹಿಳಾ ಸಂಘಟನೆಗಳು ಮತ್ತು ಮಹಿಳಾಪರರ ಖಂಡನೆ ವ್ಯಕ್ತವಾಯಿತು. ಆದರೆ ಮಹಿಳೆಯರ ಹೆಸರಿನಲ್ಲಿರುವ ಇಲಾಖೆಗಳಿಗಾಗಲೀ, ಮಂತ್ರಿಗಳಿಗಾಗಲೀ, ಕನಿಷ್ಠ ಘಟನೆ ನಡೆದ ಹಳ್ಳಿಗೆ ಭೇಟಿ ನೀಡುವಷ್ಟೂ ಈ ಘಟನೆ ಮಹತ್ವದ್ದೆಂದು ಅನ್ನಿಸಲಿಲ್ಲ!

ದಲಿತ ಮಹಿಳೆಯರ ಮೇಲೆ ನಿರಂತರವಾಗಿ ನಡೆಯುತ್ತಿರುವ ಜಾತಿಹಿಂಸೆಯ ಪ್ರಕರಣಗಳು ಸುದ್ದಿಯೂ ಆಗದೆ ಕಳೆದು ಹೋಗುತ್ತಿವೆ. ಕಳೆದ ವರ್ಷ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗ್ರಾಮ ಪಂಚಾಯತಿ ಸದಸ್ಯೆ ಹೊನ್ನಮ್ಮನವರ ಕೊಲೆಯಾಯಿತು. ಊರಿನ ಮೇಲ್ಜಾತಿ ಪುಢಾರಿಗಳ ಭ್ರಷ್ಟಾಚಾರವನ್ನು ವಿರೋಧಿಸಿ ಜನಪರವಾಗಿ ಉಳಿಯಲು ಬಯಸಿದ್ದು ಮತ್ತು ಅದಕ್ಕಾಗಿ ಹೋರಾಡಿದ್ದೇ ಅವರು ಮಾಡಿದ 'ಅಪರಾಧ'. ಇನ್ನೂ ಒಂದು ವರ್ಷದ ಕೆಳಗೆ ಚಿತ್ರದುರ್ಗದ ಭಾಗ್ಯಮ್ಮ, ಕಾರಣವೇ ಇಲ್ಲದೆ ಬೆತ್ತಲೆ ಮೆರವಣಿಗೆಯ ಅವಮಾನ ಅನುಭವಿಸಬೇಕಾಯಿತು. ನ್ಯಾಯಕ್ಕಾಗಿ ಹಲವು ಸಂಘಟನೆಗಳು, ಪ್ರಗತಿಪರರೆಲ್ಲ ಸೇರಿ ನಿರಂತರವಾಗಿ ಹೋರಾಡಿದರೂ ಸರ್ಕಾರ ಸ್ಪಂದಿಸಲಿಲ್ಲ.



ಆಸಿಡ್ ದಾಳಿಯಂತಹ ಘೋರ ಹಿಂಸೆಗೊಳಗಾದ ಮಹಿಳೆಯರ ಬವಣೆಯೂ ಇವರನ್ನು ತಟ್ಟುತ್ತಿಲ್ಲ. ಆಸಿಡ್ ದಾಳಿಗೊಳಗಾದವರು ಕಳೆದ 5 ವರ್ಷಗಳಿಂದ 'ಬಿಟ್ಟಿಯಾಗಿ ಕೂರಿಸಿ ಅನ್ನ ಹಾಕಿ ಎಂದು ಕೇಳುತ್ತಿಲ್ಲ; ದುಡಿಯಲು ಒಂದು ಉದ್ಯೋಗ ಕೊಡಿ, ಸ್ವಾಭಿಮಾನಿಗಳಾಗಿ ಬದುಕುತ್ತೇವೆ' ಎಂದು ಸಂಬಂಧಪಟ್ಟ ಎಲ್ಲಾ ಇಲಾಖೆಗಳ ಬಾಗಿಲು ತಟ್ಟುತ್ತಲೇ ಇದ್ದಾರೆ. ಆದರೆ ಅವರ ಕೂಗು ಅರಣ್ಯರೋದನವಾಗಿದೆ. ಹಾಗಾದರೆ ಮಹಿಳೆಯರ ಹೆಸರಿನಲ್ಲಿ ಹುಟ್ಟಿಕೊಂಡಿರುವ ಇಲಾಖೆಗಳಾಗಲೀ, 'ಮಹಿಳಾಪರ' ಎಂದು ಕೊಚ್ಚಿಕೊಳ್ಳುವ ಸರ್ಕಾರಗಳಾಗಲೀ, ಕರ್ನಾಟಕದ ಯಾವುದೇ ಮಹಿಳೆಯರ ಪಾಲಿಗೆ 'ಇಲ್ಲವಾಗಿವೆ'.

ಹೀಗೆ, ಪ್ರತಿನಿತ್ಯ ಒಂದಲ್ಲಾ ಒಂದು ರೀತಿಯಲ್ಲಿ ಮಹಿಳೆಯರ ಸಾಮಾಜಿಕ ಪಾತ್ರವನ್ನು ಕುಗ್ಗಿಸುವ ಪ್ರಯತ್ನಗಳು ಹೆಚ್ಚುಹೆಚ್ಚಾಗುತ್ತಲೇ ಇದ್ದರೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರಾಗಿದ್ದ ಸಿ.ಸಿ.ಪಾಟೀಲ್, ಮಹಿಳೆಯರು ಧರಿಸುವ ಉಡುಪುಗಳು ಪ್ರಚೋದನಕಾರಿಯಾಗಿರುವುದೇ ದೌರ್ಜನ್ಯ ಹೆಚ್ಚಲು ಕಾರಣ ಎಂದು ಹೇಳಿಕೆ ನೀಡಿದ್ದರು. ಆದ್ದರಿಂದ ಮಹಿಳೆಯರಿಗೆ 'ವಸ್ತ್ರಸಂಹಿತೆ' ಜಾರಿಮಾಡಬೇಕೆಂದೂ ಬಿಟ್ಟಿಸಲಹೆ ಕೊಟ್ಟರು. ಆದರೆ ಕೆಲವೇ ದಿನಗಳಲ್ಲಿ ರಾಜ್ಯದ ಹಲವು ಜ್ವಲಂತ ಸಮಸ್ಯೆಗಳನ್ನು ಚರ್ಚಿಸುವ ವೇದಿಕೆಯಾದ ವಿಧಾನಸಭೆಯ ಅಧಿವೇಶನವನ್ನು, ತಮ್ಮ ಲಂಪಟತನವನ್ನು ಪ್ರದರ್ಶಿಸುವ ವೇದಿಕೆಯನ್ನಾಗಿ ಮಾಡಿಕೊಂಡು, 'ಬ್ಲೂಫಿಲಂ' ನೋಡುತ್ತಾ ಸಿಕ್ಕಿಬಿದ್ದರು. ಮಹಿಳೆಯರ ಮೇಲೆ ಹೆಚ್ಚುತ್ತಿರುವ ದೌರ್ಜನ್ಯಕ್ಕೆ ಕಾರಣ ಹಿಂಸಾತ್ಮಕ ಮನೋಭಾವವೇ ಹೊರತು ಮಹಿಳೆಯರ ಉಡುಪಲ್ಲ ಎಂದು ಮತ್ತೊಮ್ಮೆ ಸಾಬೀತಾಯಿತು. ಜೊತೆಗೆ ಕರ್ನಾಟಕದಲ್ಲಿ ಮಹಿಳೆಯರ ಮಟ್ಟಿಗೆ 'ಬೇಲಿಯೇ ಎದ್ದು ಹೊಲ ಮೇಯುತ್ತಿದೆ' ಎಂಬುದೂ ಕೂಡಾ!

ವಿಜಯ ಮಲ್ಯನಂತಹ ಬಡವರ ರಕ್ತಹೀರುವ ಹೆಂಡದ ದೊರೆಗಳ ಲಾಭನಷ್ಟಗಳ ಬಗೆಗೆ ಸರ್ಕಾರಕ್ಕೆ ಅಪಾರ ಕಾಳಜಿ! ಆದರೆ ಅವರಂತಹ ಲೂಟಿಕೋರರಿಂದ ಬೀದಿಗೆ ಬಿದ್ದಿರುವ ಬಡವರ ಸಂಸಾರಗಳ ಪಾಡು ಮುಖ್ಯವಲ್ಲ! ಇದೇ ನಾಡಿನ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರ ದುಃಖ–ದುಮ್ಮಾನಗಳು ಕಾಲಕಸ! ಪರಿಸ್ಥಿತಿ ಹೀಗಿರುವಾಗ ಮಹಿಳೆಯರ ಮೂಗಿಗೆ ತುಪ್ಪ ಸವರಿದಂತೆ ಕೆಲವು ಯೋಜನೆ ಹೊರಡಿಸಿದ ಕೂಡಲೇ, ಅಥವಾ ಮಹಿಳೆಯರಿಗೆ ಸಂಬಂಧಿಸಿದ ಇಲಾಖೆಗಳನ್ನು ಶೋಕೇಸಿನಲ್ಲಿ ಅಲಂಕಾರಕ್ಕಿಟ್ಟ ಕೂಡಲೇ ಮರುಳಾಗುವವರು ನಾವಲ್ಲ ಎಂಬುದನ್ನು ಸಾರಿ ಹೇಳಬೇಕಾಗಿದೆ. ಮಹಿಳೆಯರ ಉದ್ಧಾರ

ಕೇವಲ ಚುನಾವಣಾ ಪ್ರಚಾರಕ್ಕಲ್ಲ; ಅದನ್ನು ನಿಜವಾದ ಅರ್ಥದಲ್ಲಿ ಜಾರಿಗೆ ತರುವಂತೆ ನಾಡಿನ ಮಹಿಳೆಯರು ಮತ್ತು ಪ್ರಜ್ಞಾವಂತ ನಾಗರೀಕರೆಲ್ಲರೂ ಸರ್ಕಾರವನ್ನು ಒತ್ತಾಯಿಸಬೇಕಾಗಿದೆ. ಮಹಿಳೆಯರಿಗೆ ಇಂದು ದೊರೆತಿರುವ ಹಕ್ಕುಗಳಾಗಲೀ, ರಚನೆಯಾಗಿರುವ ಮಹಿಳಾ ಪರ ಕಾನೂನುಗಳಾಗಲೀ, ಸ್ಥಾಪಿಸಲಾಗಿರುವ ಮಹಿಳಾ ಆಯೋಗದಂತಹ ಸಂಸ್ಥೆಗಳಾಗಲೀ, ಸರ್ಕಾರ ಮಹಿಳೆಯರಿಗೆ ತೋರುತ್ತಿರುವ 'ಕೃಪೆ'ಯಲ್ಲ; ಅದರ ಹಿಂದೆ ಮಹಿಳಾ ಹೋರಾಟದ ದೊಡ್ಡ ಇತಿಹಾಸವೇ ಇದೆ. ಹೋರಾಡಿ ಪಡೆದ ಕೆಲವಾದರೂ ಸವಲತ್ತುಗಳನ್ನು ಕಸಿಯಲು ಸರ್ಕಾರ ಹೊರಟರೆ ನಾವುಗಳು ಕೈಕಟ್ಟಿ ಕುಳಿತಿರಬೇಕೇ?

2012 ಅಂತರರಾಷ್ಟ್ರೀಯ ದುಡಿವ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಸಮಾನತಾ ಮಹಿಳಾ ವೇದಿಕೆ, ಹಲವು ಮಹಿಳಾ ಸಂಘಟನೆಗಳ ಬೆಂಬಲದೊಂದಿಗೆ 'ತಮಟೆ ಚಳುವಳಿ' ಹಮ್ಮಿಕೊಂಡಿದೆ. ಬೆಂಗಳೂರಿನ ಮಹಿಳಾ ಆಯೋಗದ ಕಛೇರಿಗೆ ಮುತ್ತಿಗೆ ಹಾಕಿ, ತಮಟೆ ಬಡಿದು ಮಲಗಿರುವ ಸರ್ಕಾರವನ್ನು ಎಚ್ಚರಿಸುವ ಪ್ರಯತ್ನ ಇದಾಗಿದೆ. ಮಾರ್ಚ್-7, ಬುಧವಾರದಂದು ನೂರಾರು ಮಹಿಳೆಯರು ಬೆಂಗಳೂರಿನ ಟೌನ್‌ಹಾಲ್ ವೃತ್ತದಿಂದ ಮೆರವಣಿಗೆ ಹೊರಟು ಕಾವೇರಿ ಭವನದಲ್ಲಿರುವ ಮಹಿಳಾ ಆಯೋಗದ ಕಛೇರಿಗೆ ಮುತ್ತಿಗೆ ಹಾಕುವ ಈ ಕಾರ್ಯಕ್ರಮದ ಬೇಡಿಕೆಗಳು ಇಂತಿವೆ.

- ತಲೆತಲಾಂತರಗಳಿಂದ ನಗರವನ್ನು ಸ್ವಚ್ಛಗೊಳಿಸುತ್ತಾ ಬದುಕನ್ನೇ ಸವೆಸುತ್ತಿರುವವರು ಪೌರಕಾರ್ಮಿಕರು. ದಶಕಗಳ ಹಿಂದೆ ಬದುಕಿಗಾಗಿ ಅಕ್ಕಪಕ್ಕದ ರಾಜ್ಯಗಳಿಂದ ವಲಸೆ ಬಂದು ಇಲ್ಲಿಯೇ ನೆಲೆಸಿರುವ ಇವರು, ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ ಅತ್ಯಂತ ಹಿಂದುಳಿದವರಾಗಿದ್ದಾರೆ. ಪೌರಕಾರ್ಮಿಕರಲ್ಲಿ ಶೇ.90ರಷ್ಟು ಮಂದಿ ಮಹಿಳೆಯರು. ಈಗಂತೂ ಸರ್ಕಾರವೇ ಇವರನ್ನು ಗುತ್ತಿದೆ ಆಧಾರದಲ್ಲಿ ಕನಿಷ್ಠ ವೇತನವನ್ನೂ ನೀಡದೆ ಬಿಡಿಗಾಸಿಗೆ ದುಡಿಸುತ್ತಿದೆ. ಅತ್ಯಂತ ಶೋಷಿತ ದಲಿತಜಾತಿಗೆ ಸೇರಿರುವು ದರಿಂದಲೂ, ಕೆಲಸದ ಭದ್ರತೆ ಇಲ್ಲದಿರುವುದರಿಂದಲೂ ಇವರು ಹಲವಾರು ರೀತಿಯ ಸಾಮಾಜಿಕ, ಲೈಂಗಿಕ ದೌರ್ಜನ್ಯಗಳಿಗೆ ತುತ್ತಾಗುತ್ತಿದ್ದಾರೆ. ಆದ್ದರಿಂದ ಈ ಎಲ್ಲಾ ಪೌರಕಾರ್ಮಿಕ ಮಹಿಳೆಯರಿಗೂ ಕನಿಷ್ಠ ವೇತನ ಮಾತ್ರವಲ್ಲದೆ, ಸಮಾನ ವೇತನ, ಕೆಲಸದ ಸ್ಥಳದಲ್ಲಿ ಸುರಕ್ಷತೆ ಹಾಗೂ ಇನ್ನಿತರೆ ಅಭಿವೃದ್ಧಿ ಪೂರಕ ಕ್ರಮಗಳನ್ನು ಕೈಗೊಳ್ಳುವಂತೆ ಸರ್ಕಾರದ ಮೇಲೆ ಒತ್ತಡ ಹಾಕಬೇಕಾಗಿದೆ.



- ಎಲ್ಲಾ ನಗರ ಪಟ್ಟಣಗಳಲ್ಲೂ ನಗರ ನಿರ್ಮಾತೃಗಳಾದ ಬಡಜನರು ಕೊಳಚೆ ಪ್ರದೇಶಗಳಲ್ಲಿಯೇ ವಾಸಿಸುತ್ತಿದ್ದಾರೆ. ಸ್ಲಂ ಮಹಿಳೆಯರ ಸ್ಥಿತಿಯಂತೂ ಅತ್ಯಂತ ಶೋಚನೀಯವಾಗಿದೆ. ಕನಿಷ್ಠ ಮೂಲಭೂತ ಸೌಲಭ್ಯಗಳು ಮತ್ತು ಭದ್ರತೆಯಿಲ್ಲದೆ ಅವರು ಹತ್ತು ಹಲವು ರೀತಿಯ ಆರೋಗ್ಯದ ಸಮಸ್ಯೆಗಳಿಗೂ, ದೌರ್ಜನ್ಯಗಳಿಗೂ ತುತ್ತಾಗುತ್ತಿದ್ದಾರೆ. ಈ ನಿಟ್ಟಿನಲ್ಲಿ ಎಲ್ಲ ಸ್ಲಂ ಮಹಿಳೆಯರಿಗೆ ಕನಿಷ್ಠ ಭದ್ರತೆ ಮತ್ತು ಮೂಲಭೂತ ಸೌಲಭ್ಯ ಒದಗಿಸುವ ನಿಟ್ಟಿನಲ್ಲಿ ಮಹಿಳಾ ಆಯೋಗ ಸಕ್ರಿಯವಾಗಬೇಕು.
- ಮದ್ಯಪಾನ ಯಾವಾಗಿನಿಂದಲೂ ಮಹಿಳಾ ಕುಲಕ್ಕೆ ಘೋರ ಶಾಪವಾಗಿದೆ. ಸರ್ಕಾರ ನಾಗರೀಕರ ಸೌಖ್ಯ-ಸುರಕ್ಷತೆಗಳಿಗಿಂತ ಹೆಂಡದ ದೊರೆಗಳ ಲಾಭಕೋರತನಕ್ಕೆ ಪೂರಕವಾದ ನೀತಿಗಳನ್ನು ತರುವುದರಲ್ಲಿ ಮಗ್ನವಾಗಿದೆ. ಈಗಂತೂ ನೇರವಾಗಿ ಸರ್ಕಾರವೇ ಎಂಎಸ್‌ಐಎಲ್ ಹೆಸರಿನಲ್ಲಿ ದೊಡ್ಡ ಹಳ್ಳಿಗಳಿಗೆ ಮದ್ಯಮಾರಾಟ ಮಳಿಗೆಗಳನ್ನು ತೆರೆಯಲು ಹೊರಟಿದೆ. ಅಲ್ಲದೆ ಪ್ರತೀ ಮದ್ಯದಂಗಡಿಗೂ ನಿರ್ದಿಷ್ಟ ಪ್ರಮಾಣದ ಮದ್ಯ ಮಾರಾಟವನ್ನು ಕಡ್ಡಾಯಗೊಳಿಸಿ ಜನರ ಕುಡಿತವನ್ನು ಉತ್ತೇಜಿಸುತ್ತಿದೆ. ಇದರ ನೇರ ಪರಿಣಾಮವನ್ನು ಕರ್ನಾಟಕದ ಇಡೀ ಮಹಿಳಾ ಸಮುದಾಯವೇ ಅನುಭವಿಸುವಂತಾಗಿದೆ. ಈ ಬಗ್ಗೆ ಈ ಕೂಡಲೇ ಮಹಿಳಾ ಆಯೋಗ, ಮಾಹಿತಿ ಸಂಗ್ರಹಿಸಿ ಸರ್ಕಾರ ಈ ನೀತಿಯಿಂದ ಹಿಂದೆ ಸರಿಯುವಂತೆ ಒತ್ತಾಯಿಸಬೇಕು.
- ಆಸಿಡ್ ದಾಳಿ ಮಹಿಳೆಯರ ಮೇಲೆ ನಡೆಯುತ್ತಿರುವ ಅತಿ ಭೀಕರ ದೌರ್ಜನ್ಯದ ರೂಪ. ಕರ್ನಾಟಕದಲ್ಲಿ ಸುಮಾರು 80 ಮಂದಿ ಆಸಿಡ್ ದಾಳಿಗೊಳಗಾದ ಮಹಿಳೇಯರಿದ್ದು, ಅತ್ಯಂತ ಸಂಕಷ್ಟದಲ್ಲಿ ಜೀವನ ನಡೆಸುತ್ತಿದ್ದಾರೆ. ಸರ್ಕಾರ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರು, ಇಲಾಖೆ, ಮಹಿಳಾ ಆಯೋಗ ಮೊದಲಾದ ಎಲ್ಲರಿಗೂ, ಈ ಮಹಿಳೆಯರು ಹಾಗೂ ಅವರ ಪರವಾಗಿ csaaaw (campaign and struggle against acid attacks on women) ಪದೇಪದೇ ಸಮಸ್ಯೆಗಳನ್ನು ಗಮನಕ್ಕೆ ತಂದಿದ್ದರೂ ಯಾವುದೇ ಪ್ರಯೋಜನವಾಗಿಲ್ಲ. 4 ವರ್ಷಗಳ ಕೆಳಗೆ ನೀಡಿದ 2 ಲಕ್ಷ ಪರಿಹಾರ ಬಿಟ್ಟರೆ, ಆಸಿಡ್ ದಾಳಿ ತಡೆಯುವುದಕ್ಕಾಗಲೀ, ನೊಂದ ಮಹಿಳೆಯರ ಬದುಕಿಗೆ ದಾರಿ ಮಾಡುವುದಕ್ಕಾಗಲೀ ಸರ್ಕಾರ ಪ್ರಯತ್ನಿಸಿಲ್ಲ. ಈ ದಿಕ್ಕಿನಲ್ಲಿ ಮಹಿಳಾ ಆಯೋಗ ಕೂಡಾ ಜಾಣಗುರುಡು ಪ್ರದರ್ಶಿಸುತ್ತಿರುವುದನ್ನು ನಾವು ತೀವ್ರವಾಗಿ ಖಂಡಿಸುತ್ತೇವೆ. ತಕ್ಷಣವೇ ಈ ಬಗ್ಗೆ ಖಚಿತ ಕ್ರಮಗಳನ್ನು ಕೈಗೊಳ್ಳಬೇಕೆಂದು ಆಗ್ರಹಿಸುತ್ತೇವೆ.
- ರಾಜ್ಯದಲ್ಲಿ ಸತತವಾಗಿ ದಲಿತ ಮಹಿಳೆಯರ ಮೇಲಿನ ದೌರ್ಜನ್ಯ ಪ್ರಕರಣಗಳು ವರದಿಯಾಗಿವೆ. ಈಗಾಗಲೇ ಮಹಿಳಾ ಸಂಘಟನೆಗಳು ಈ ಕುರಿತು ಸತ್ಯಶೋಧನೆಗಳನ್ನು, ಪ್ರತಿಭಟನೆಗಳನ್ನು ನಡೆಸಿದ್ದರೂ ಮಹಿಳಾ ಆಯೋಗ ಮಾತ್ರ ತಟಸ್ಥವಾಗಿದೆ. ಈ ಕುರಿತು ಸತತವಾಗಿ ಕೆಲಸ ಮಾಡುತ್ತಿರುವ ಸಂಘಟನೆಗಳ ಸಹಾಯ ಪಡೆದು ಈ ಪ್ರಕರಣಗಳಲ್ಲಿ ಮಧ್ಯಪ್ರವೇಶ ಮಾಡಬೇಕೆಂದು ಆಗ್ರಹಿಸುತ್ತೇವೆ.
- ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ ಆಬಲವಾಡಿಯಲ್ಲಿ, ಇತ್ತೀಚೆಗೆ ನಡೆದ 'ಸುವರ್ಣ' ಎಂಬ ಯುವತಿಯ ಕಗ್ಗೊಲೆ

ನಮಗೆಲ್ಲಾ ಆಘಾತವನ್ನುಂಟುಮಾಡಿದೆ. ಜಾತಿ ಭೂತದ ಬೆನ್ನೇರಿ ಹೆತ್ತ ಮಗಳನ್ನೇ ಕೊಲ್ಲುವಂತಹ ಬೆಳವಣಿಗೆಗಳು ಮುಂದುವರೆದರೆ ಹೆಣ್ಣು ಮಕ್ಕಳ ಬದುಕು ಮತ್ತಷ್ಟು ನರಕವಾಗಲಿದೆ. ಈ ವಿಚಾರದಲ್ಲಿ ಮಹಿಳಾ ಆಯೋಗ ಯಾವುದೇ ರೀತಿಯ ಗಂಭೀರ ಕ್ರಮಕ್ಕೆ ಮುಂದಾಗದಿರುವುದು ನಿಜಕ್ಕೂ ನಾಚಿಕೆಗೇಡಿನ ವಿಷಯ. ಈಗಲಾದರೂ ಎಚ್ಚೆತ್ತು ಈ ನಿಟ್ಟಿನಲ್ಲಿ ಸುವರ್ಣಳ ಕೊಲೆಗೂ ಮತ್ತು ವಿನಾಕಾರಣ ಊರು ಬಿಟ್ಟು ಅಲೆಯುವಂತಾಗಿರುವ ಗೋವಿಂದರಾಜು ಕುಟುಂಬಕ್ಕೂ ನ್ಯಾಯ ಒದಗಿಸಲು ಆಯೋಗ ಮುಂದಾಗಬೇಕು.

- ಗಾರ್ಮೆಂಟ್ಸ್ ಮಹಿಳೆಯರು : ಗಾರ್ಮೆಂಟ್ಸ್ ಫ್ಯಾಕ್ಟರಿಗಳಲ್ಲಿ ದುಡಿಯುತ್ತಿರುವ ಲಕ್ಷಾಂತರ ಕಾರ್ಮಿಕರಲ್ಲಿ ಶೇ.90 ರಷ್ಟು ಮಹಿಳೆಯರಿದ್ದಾರೆ. ಅವರ ಬೆವರಿನ ಫಲವನ್ನನುಭವಿಸುತ್ತಿರುವ ಮಾಲೀಕರು ಕಾರ್ಮಿಕರಿಗೆ ಮಾತ್ರ ಯಾವುದೇ ರೀತಿಯ ಮೂಲ ಸೌಕರ್ಯಗಳನ್ನೂ ನೀಡಲು ತಯಾರಿಲ್ಲ. ಕನಿಷ್ಠ ಕಾರ್ಮಿಕ ಯೂನಿಯನ್‌ಗಳನ್ನೂ ಸ್ಥಾಪಿಸಲು ಅವಕಾಶ ನೀಡದೆ ಕಾರ್ಮಿಕ ಕಾಯ್ದೆಗಳನ್ನೇ ಉಲ್ಲಂಘಿಸಲಾಗುತ್ತಿದೆ. ಅಷ್ಟಾಗಿಯೂ ಕಾರ್ಮಿಕ ಸಂಘಗಳನ್ನು ಕಟ್ಟಿ ಹೋರಾಡಿದರೂ, ಇದುವರೆಗೂ ಮಹಿಳಾ ಕಾರ್ಮಿಕರಿಗೆ ಕನಿಷ್ಠ ವೇತನವನ್ನಾಗಲೀ, ಸಮಾನ ಕೆಲಸಕ್ಕೆ ಸಮಾನ ವೇತನವನ್ನಾಗಲೀ ನೀಡಿಲ್ಲ. ಹಸುಗೂಸುಗಳನ್ನು ನೋಡಿಕೊಳ್ಳಲು ಶಿಶುಪಾಲನಾ ಕೇಂದ್ರಗಳಾಗಲೀ, ಶೌಚಾಲಯಗಳಾಗಲೀ, ಕ್ಯಾಂಟೀನ್ ವ್ಯವಸ್ಥೆಯಾಗಲೀ ಯಾವುದೂ ಇಲ್ಲ. ಅದಕ್ಕೂ ಮುಖ್ಯವಾಗಿ ಎಲ್ಲಾ ಗಾರ್ಮೆಂಟ್ಸ್‌ಗಳಲ್ಲೂ ಮಹಿಳೆಯರ ಮೇಲೆ ಪ್ರತಿನಿತ್ಯ ಲೈಂಗಿಕ ಕಿರುಕುಳ, ದೌರ್ಜನ್ಯ, ಜೊತೆಗೆ ಯಾವುದೇ ಕೈಗಾರಿಕೆಗಳಲ್ಲೂ ಇಲ್ಲದ ದೈಹಿಕ ಶಿಕ್ಷೆ ನೀಡುವುದು, ಹೊರಗೆ ನಿಲ್ಲಿಸುವುದು ಮೊದಲಾದ ಮಾನಸಿಕ ಕಿರುಕುಳ ನಡೆಯುವುದು ಸರ್ವಸಾಮಾನ್ಯ ಎಂಬಂತಿದೆ. ಪಿಎಫ್, ಇಎಸ್‌ಐ ನೀಡದೆ ವಂಚಿಸಲಾಗುತ್ತಿದೆ. ಈ ಎಲ್ಲವನ್ನೂ ತಡೆಯುವ ನಿಟ್ಟಿನಲ್ಲಿ ಸರ್ಕಾರ ಮತ್ತು ಕಾರ್ಮಿಕ ಇಲಾಖೆ ಕೂಡಲೇ ಕಾರ್ಯಪ್ರವೃತ್ತವಾಗಬೇಕು.

- ಮನೆಕೆಲಸದ ಕಾರ್ಮಿಕರಾಗಿ ಕರ್ನಾಟಕದಲ್ಲಿ ದುಡಿಯುತ್ತಿರುವ ಸಾವಿರಾರು ಮಹಿಳೆಯರು ಕಾರ್ಮಿಕರೆಂದೇ ಪರಿಗಣಿಸಲ್ಪಟ್ಟಿಲ್ಲ. ಯಾವುದೇ ಕೆಲಸದ ಭದ್ರತೆಯಾಗಲಿ, ಸುರಕ್ಷತೆಯಾಗಲಿ, ನಿಗದಿತ ವೇತನವಾಗಲಿ ಅವರಿಗಿಲ್ಲ. ಕೇಂದ್ರ ಸರ್ಕಾರ ಇವರಿಗಾಗಿ ಕಲ್ಯಾಣ ಮಂಡಳಿ ರಚಿಸಿದ್ದರೂ, ರಾಜ್ಯದಲ್ಲಿ ಇನ್ನೂ ನಿಯಮಾವಳಿಗಳನ್ನು ರೂಪಿಸಿ, ಇದನ್ನು ಜಾರಿಗೊಳಿಸಬೇಕಾಗಿದೆ. ಈ ನಿಟ್ಟಿನಲ್ಲಿ ಮನೆ ಕೆಲಸದ ಕಾರ್ಮಿಕರಿಗೆ, ಕನಿಷ್ಠ ವೇತನ, ಇಎಸ್‌ಐ-ಪಿಎಫ್ ಮೊದಲಾದ ಸೌಲಭ್ಯಗಳನ್ನು ನೀಡುವುದಕ್ಕೆ ಹಾಗೂ ಕಾರ್ಮಿಕರ ನೋಂದಣಿ ಪ್ರಕ್ರಿಯೆ ಆರಂಭಿಸುವುದಕ್ಕೆ ಕಾರ್ಮಿಕ ಇಲಾಖೆಯ ಮೇಲೆ ಒತ್ತಡ ಹೇರುವ ಜವಾಬ್ದಾರಿ ಮಹಿಳಾ ಆಯೋಗ ವಹಿಸಿಕೊಳ್ಳಬೇಕಾಗಿದೆ.

- ಇತ್ತೀಚೆಗೆ ಪತ್ರಿಕೆಗಳಲ್ಲಿ ವ್ಯಾಪಕವಾಗಿ ವರದಿಯಾಗಿರುವ ಅಪೌಷ್ಟಿಕತೆ ಪ್ರಕರಣಗಳು, ನಾಡಿನ ಮಹಿಳೆಯರು ಮತ್ತು ಮಕ್ಕಳ ಪರಿಸ್ಥಿತಿಯನ್ನು ನಿಜಕ್ಕೂ ಕರ್ನಾಟಕ ಸರ್ಕಾರದ ಮುಖಕ್ಕೆ ರಾಚುವಂತೆ ಮುಂದಿಟ್ಟಿವೆ. ಕಡುಬಡತನದಲ್ಲಿ ಬದುಕು ಸವೆಸುತ್ತಿರುವ ನಾಡಿನ ಲಕ್ಷಾಂತರ ಕುಟುಂಬಗಳಿಗೆ ಸರ್ಕಾರ ಸರಿಯಾದ ಪಡಿತರ ವ್ಯವಸ್ಥೆಯನ್ನೂ ಮಾಡದೆ, ಈಗ ಇರುವ ಕಾರ್ಡುಗಳನ್ನೂ ಹತ್ತು ಹಲವು ನೆಪಗಳನ್ನು ಮುಂದಿಟ್ಟು ಕಿತ್ತುಕೊಳ್ಳಲು ಹೊರಟಿದೆ. ಮಹಿಳೆಯರು ಮತ್ತು ಮಕ್ಕಳ ಅಪೌಷ್ಟಿಕತೆ ಅತ್ಯಂತ ಗಂಭೀರ ವಿಚಾರವಾಗಿದ್ದು, ಇದನ್ನು ತತ್‌ಕ್ಷಣ ಆಯೋಗ ಕೈಗೆತ್ತಿಕೊಂಡು ವಿವರವಾಗಿ ಪರಿಶೀಲಿಸಿ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸುಗಳನ್ನು ಮಾಡಬೇಕು.

- ಪ್ರತೀ ಇಲಾಖಾವಾರು ಬಜೆಟ್‌ನಲ್ಲಿ ಮಾಡುವ ಜೆಂಡರ್ ಬಜೆಟಿಂಗ್ ಸರಿಯಾಗಿ ಜಾರಿಯಾಗಬೇಕು. ಹೆಚ್ಚು ಪ್ರಚಾರ ಮಾತ್ರ ಪಡೆದುಕೊಂಡಿರುವ ಈ ಯೋಜನೆ ನಿಜಕ್ಕೂ ಮಹಿಳೆಯರಿಗೆ ಎಷ್ಟು ಉಪಯುಕ್ತವಾಗಿದೆ ಎಂಬುದರ ಬಗ್ಗೆ ಸಾರ್ವಜನಿಕರಿಗೆ ಯಾವುದೇ ಮಾಹಿತಿ ದೊರೆತಿಲ್ಲ. ಈ ಕುರಿತು ಜೆಂಡರ್ ಬಜೆಟಿಂಗ್‌ನಡಿ ಇಲಾಖಾವಾರು ಕೈಗೆತ್ತಿಕೊಂಡಿರುವ ಮಹಿಳಾಪರ ಯೋಜನೆಗಳ ಕುರಿತು ಸಾರ್ವಜನಿಕರ ಗಮನಕ್ಕೆ ತರುವ ಕೆಲಸ ಆಯೋಗ ವಹಿಸಿಕೊಳ್ಳಬೇಕು.

- ಕೌಟುಂಬಿಕ ಹಿಂಸೆ (ತಡೆ) ಕಾಯ್ದೆಯನ್ನು ಕರ್ನಾಟಕದಲ್ಲಿ ಸಮರ್ಪಕವಾಗಿ ಜಾರಿಗೊಳಿಸುವಂತೆ ಮಹಿಳಾ ಸಂಘಟನೆಗಳು ಒತ್ತಾಯಿಸುತ್ತಲೇ ಇವೆ. ಅಲ್ಲದೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ನಡೆಯುತ್ತಿರುವ ಮಹಿಳಾ ನಿಲಯಗಳ ಅವ್ಯವಸ್ಥೆಯ ಬಗ್ಗೆಯೂ, ಹೆಂಗಸರ ಹಕ್ಕಿನ ಸಂಘ, ವಿಮೋಚನಾ ಮೊದಲಾದ ಸಂಘಟನೆಗಳು ವರದಿ ತಂದಿವೆ. ಈ ಬಗ್ಗೆ ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳಬೇಕು.

- ಅಶ್ಲೀಲ ಲೈಂಗಿಕ ದೃಶ್ಯಗಳಿರುವ ಚಿತ್ರಗಳು, ಜಾಹೀರಾತುಗಳು, ವಿಡಿಯೋಗಳು ಹಿಂದಿನಿಂದಲೂ ಸಿನೆಮಾ ಹಾಗೂ ಟಿವಿಗಳಲ್ಲಿ ಯಾವುದೇ ನಿರ್ಬಂಧಗಳಿಲ್ಲದೇ ಪ್ರಸಾರವಾಗುತ್ತಲೇ ಇದ್ದವು. ಇದೀಗ ಇವು ಇಂಟರ್‌ನೆಟ್, ಮೊಬೈಲ್‌ಗಳಲ್ಲಿ ವ್ಯಾಪಕವಾಗಿ ಪ್ರಸಾರವಾಗುತ್ತಿವೆ. ಇದನ್ನು ನಿಯಂತ್ರಿಸಬೇಕಾದ ಶಾಸಕಾಂಗದ ಸಭೆಯೊಳಗೆ ಸಚಿವರುಗಳೇ ಕೂತು ಇವುಗಳನ್ನು ವೀಕ್ಷಿಸುವ ಮಟ್ಟಕ್ಕೆ ಇವು ವ್ಯಾಪಿಸಿವೆ. ಇವೆಲ್ಲದರಲ್ಲೂ ಮಹಿಳೆ ಒಂದು ಭೋಗದ ವಸ್ತುವಾಗಿ ಬಿಂಬಿತವಾಗುತ್ತಿದ್ದಾಳೆ. ಇಷ್ಟೆಲ್ಲಾ ನಡೆದರೂ ಮಹಿಳಾ ಆಯೋಗದ ನಿರ್ಲಕ್ಷ್ಯ ಅಕ್ಷಮ್ಯ. ಈ ನಿಟ್ಟಿನಲ್ಲಿ ಸಂಬಂಧಪಟ್ಟ ಸಂಸ್ಥೆಗಳು ಕಾರ್ಯಪ್ರವೃತ್ತರಾಗಿ ಸಾಧ್ಯವಿರುವ ಎಲ್ಲಾ ಕ್ರಮಗಳನ್ನು ಕೈಗೊಳ್ಳಬೇಕು.



ಸಮಾನತಾ
ಮಹಿಳಾ ವೇದಿಕೆ

### ಕೆ. ಸತ್ಯನಾರಾಯಣರ

# "ಪ್ರಸಿದ್ಧನಾಮಾ"

### ಒಂದು ಸಮೀಕ್ಷೆ

■ ಗಿರಿಜಾಶಾಸ್ತ್ರಿ, ಮುಂಬಯಿ




ಈ ಕಥಾ ಸಂಕಲನದ ಶೀರ್ಷಿಕೆಯೇ ಹೇಳುವಂತೆ ಇದು ಪ್ರಸಿದ್ಧ ನಾಮರ ಸುತ್ತ ಹೆಣೆದ ಕಥೆಗಳು. ಇದು ಅಷ್ಟೇ ಆಗಿದ್ದರೆ ಒಂದು ವ್ಯಕ್ತಿಚಿತ್ರಗಳ ಸಂಕಲನ (caricatures)ವಾಗಿಬಿಡಬಹುದಿತ್ತು. ಕನ್ನಡದಲ್ಲಿ ಇಂತಹ ವ್ಯಕ್ತಿಚಿತ್ರಗಳು ಬಂದಿವೆ ಮತ್ತು ಅವು ತಮ್ಮ ಮಟ್ಟಿಗೆ ಘನವಾದ ಸಂದೇಶವನ್ನು ಸಮಾಜಕ್ಕೆ ಸಾರುತ್ತಾ ಮೌಲ್ಯಾಧಾರಿತ ಕೃತಿಗಳಾಗಿ ಉಳಿದುಕೊಂಡು ಬಿಟ್ಟಿವೆ. ಹಾಗೆ ಅವುಗಳ ಕೊಡುಗೆಯೇನೂ ಸಾಮಾನ್ಯವಾದುದಲ್ಲ. ಆದರೆ ಇಂತಹ ಪ್ರಸಿದ್ಧನಾಮರ ಜೀವನ ಹಾಗೂ ಆದರ್ಶಗಳಿಗೂ ಜನಸಾಮಾನ್ಯರ ಬದುಕಿಗೂ ಇರುವ ಅಗಾಧವಾದ ಅಂತರವನ್ನು ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಿ ಉದ್ದಕ್ಕೂ ಕಾಣಬಹುದಾಗಿದೆ. ಇಂತಹ ಅಂತರವೇ ಕಾಲ ಕಾಲಕ್ಕೆ ದೊಡ್ಡ ಮನುಷ್ಯರ ಜೀವನಾದರ್ಶನಗಳನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳಬೇಕಾದ (revive) ಅನಿವಾರ್ಯತೆಯನ್ನೂ ತಂದೊಡ್ಡಿದೆ. ಇದಕ್ಕೆ ಕಾರಣ ದೊಡ್ಡ ವ್ಯಕ್ತಿಗಳ ಆದರ್ಶಗಳು ಸಾಮಾನ್ಯಜನರ ಬದುಕಿನಲ್ಲಿ ಸಾಕ್ಷಾತ್ಕಾರಗೊಳ್ಳಲು ಸಾಧ್ಯವಾಗದಂತಹ ಸಾಮಾಜಿಕ ಸಂದರ್ಭ. ಆದರ್ಶದ ಕಲ್ಪನೆ ನೇರ ಮತ್ತು ಸರಳವಾದುದು. ಆದರೆ ಅದರ ವಾಸ್ತವಿಕ ಆಚರಣೆ ಸಂಕೀರ್ಣವಾದುದು. ಆದರ್ಶಗಳು ಆಕಾಶಗಾಮಿಗಳಾದರೆ, ಆಚರಣೆಗಳು ಈ ನೆಲಕ್ಕೆ ಸಂಬಂಧಿಸಿದವು. ಅವು ಈ ನೆಲದ ಬದುಕಿನಲ್ಲಿಯೇ ನಿರ್ಮಾಣಗೊಳ್ಳ ಬೇಕಾದವು. ಈ ನೆಲದ ವೈವಿಧ್ಯದಂತೆಯೇ ಇವುಗಳಿಗೆ ಅನಂತ ಮುಖಗಳಿವೆ ಹಾಗು ಅವು ಅಷ್ಟೇ ಸಂಕೀರ್ಣವಾಗಿವೆ. ಆದರ್ಶಗಳಿಗೆ ಇರುವಂತೆ ಆಚರಣೆಗಳಿಗೆ ಇಂತಹುದೇ ಎನ್ನುವ ಸರಳ ಸೂತ್ರಗಳಿಲ್ಲ. ಕೆ. ಸತ್ಯನಾರಾಯಣರು ಕಟ್ಟಿಕೊಡುವ ಈ ಪ್ರಸಿದ್ಧನಾಮರ ಕೃತಿಯಲ್ಲಿ ಪ್ರಸಿದ್ಧ ವ್ಯಕ್ತಿಗಳ ಆದರ್ಶಗಳು ಅವರು ಎತ್ತಿಹಿಡಿಯುವ ಮೌಲ್ಯಗಳು ಒಂದು ದ್ವೀಪವಾಗಿ ಪ್ರತ್ಯೇಕ ಉಳಿಯದೇ ಸಾಮಾನ್ಯ ಜನರ ಬದುಕಿನ ಜೊತೆಗೆ interact ಮಾಡುತ್ತವೆ ಎನ್ನುವ ಕಾರಣದಿಂದಲೇ ಕನ್ನಡಕ್ಕೆ ಇದು ಒಂದು ವಿಶಿಷ್ಟ ಕೃತಿ. ಆದರ್ಶಗಳು ಆಚರಣೆಯ ನೆಲೆಯಲ್ಲಿ ಸಾಕ್ಷಾತ್ಕಾರಗೊಳ್ಳುವುದರ ಮೂಲಕವೇ ಅವು ಎಷ್ಟು ಹುಸಿ ಮತ್ತು ಗಟ್ಟಿ ಎಂಬುದು ಇತ್ಯರ್ಥವಾಗುತ್ತದೆ. ಆದುದರಿಂದ ಸಾಮಾನ್ಯರ ಬದುಕಿನ ಆಚರಣೆಗಳೇ ಆದರ್ಶಗಳ ಮಾನದಂಡಗಳು.

ದೊಡ್ಡ ಮನುಷ್ಯರು ಯಾವಾಗಲೂ ಜನಸಾಮಾನ್ಯರಿಂದ ದೂರವೇ ಉಳಿಯುವವರು. ಇಂತಹ ದೊಡ್ಡ ಮನುಷ್ಯರ ಆದರ್ಶಗಳಿಂದ ಜನ ಸಾಮಾನ್ಯರಿಗೆ ಏನು ಪ್ರಯೋಜನ ಎಂದು ದೂರದರ್ಶನದ ಸಂದರ್ಶನದಲ್ಲಿ ಪ್ರಶ್ನೆಯನ್ನು ಕೇಳುವಂತೆ ಕೇಳಿಬಿಡಬಹುದೇನೋ. ಇಂತಹ ಅಮೂರ್ತವಾದ ಪ್ರಶ್ನೆಗಳಿಗೆ (ಒಮ್ಮೊಮ್ಮೆ ಅಸಂಬದ್ಧ) ಕಂಡುಕೊಳ್ಳುವ ಉತ್ತರಗಳು ಮಾತ್ರ ಘನೀಭೂತವಾದವು, ವ್ಯಕ್ತಿ ವಿಶಿಷ್ಟವಾದವು ಮತ್ತು ವಿಭಿನ್ನವಾದವು. ಇಂತಹ ವಿಚಾರಗಳ ಬಗ್ಗೆ ಕೆ. ಸತ್ಯನಾರಾಯಣರು ತಮ್ಮ ಈ ಕತೆಗಳ ಮೂಲಕ ಕಟ್ಟಿಕೊಡುತ್ತಾರೆ.

ಆದರ್ಶಗಳು, ಅವು ಸಾರುವ ಮೌಲ್ಯಗಳು ಕಾಲಾತೀತ ಎನ್ನುವುದಾದರೆ ಅವುಗಳನ್ನು ಕಾಲದ ಎಲ್ಲ ಘಟ್ಟಗಳಲ್ಲಿಯೂ ಆಚರಣೆಯ ನಿಕಷಕ್ಕೆ ಒಡ್ಡಬೇಕಾಗಿರುವುದು ಅನಿವಾರ್ಯವಾಗುತ್ತದೆ. ಯಾಕೆಂದರೆ ಅಮೂರ್ತವಾದ ಇಂತಹ ಪರಿಕಲ್ಪನೆಗಳು ಚಲಿಸುವುದು ಮೂರ್ತವಾದ, ಕಾಲದ ಘನ ವಿವರಗಳ ಮೂಲಕವೇ. ಕಾಲದ ಪರೀಕ್ಷೆಗೆ ಒಡ್ಡಿಕೊಳ್ಳುವುದರಿಂದಲೇ ಇವು ಮಾನವೀಕರಣಕ್ಕೆ ಒಳಗಾಗುತ್ತವೆ. ಆದುದರಿಂದ ಇವುಗಳನ್ನು ಆಯಾ ಕಾಲದ ಸಾಮಾಜಿಕ ಸಂದರ್ಭಗಳ ಮೂಲಕವೇ ಅವುಗಳನ್ನು ಸಾಕ್ಷಾತ್ಕರಿಸಿಕೊಳ್ಳ ಬೇಕಾಗುತ್ತದೆ. ಹೀಗಾಗಿ ಇಂತಹ ಆದರ್ಶಗಳನ್ನು ಕಾಲದಿಂದ ಕಾಲಕ್ಕೆ ನವೀಕರಿಸಬೇಕಾದ ಅಗತ್ಯಕೂಡ ಇದೆ ಎಂಬುದನ್ನೂ ಈ ಕತೆಗಳು ಧ್ವನಿಸುತ್ತಿವೆಯೋ ಏನೋ.

ಸಾಮಾನ್ಯ ಜನರ ಕಣ್ಣಿನ ಮೂಲಕ ಈ ಪ್ರಸಿದ್ಧನಾಮರನ್ನು ನೋಡಲಾಗಿದೆಯೇ ವಿನಃ ಅದರ ವಿರುದ್ಧವಾಗಿಯಲ್ಲ. ನಜೀರ ಸಾಬುವಿನ ಪಂಚಾಯತ್ ರಾಜ್‌ನ ಅಭಿವೃದ್ಧಿಯ ಕನಸುಗಳಿಗೆ ಸೀತಾಲಕ್ಷ್ಮಿ ಚಾಲನೆ ಕೊಟ್ಟರೆ, ಜೆ.ಪಿ.ಯ ಆದರ್ಶಗಳನ್ನು ಲಲಿತಾ ಕಾರ್ಯರೂಪಕ್ಕೆ ತರುವ ಪ್ರಯತ್ನಮಾಡುತ್ತಾಳೆ. ವಿಶ್ವೇಶ್ವರಯ್ಯನವರನ್ನು ಮುದುಕಿ ಕಾಣುವ ಬಗೆ, ಸಮಾಜ ವಿಶ್ವೇಶ್ವರಯ್ಯನವರನ್ನು ಕಂಡ ಬಗೆಗಿಂತ ವಿಭಿನ್ನವಾಗಿದೆ. ಕಮಲಾದಾಸ್‌ರ ಅನನ್ಯವಾದ ನಂಬಿಕೆಗಳನ್ನು ಶಿವಕಾಮಿ ಬದುಕಲು ಪ್ರಯತ್ನಿಸುತ್ತಾಳೆ. ದೇವರಾಜ ಅರಸ್ ಅವರ ಆದರ್ಶಗಳನ್ನು ಚಿನ್ನಯ್ಯ, ಗಾಂಧಿಯ ಮೌಲ್ಯಗಳನ್ನು ಸಿ.ಎಸ್.ಆಚಾರ್ಯ, ಜೆ.ಕೆ. ಚಿಂತನೆಗಳನ್ನು ಗಾಯತ್ರಿ, ಮಧುಗಿರಿ ರಾಮುವಿನದ್ದನ್ನು ರಾಜಶೇಖರ್, ಮಾರ್ಕ್ ಟುಲಿಯ ನಂಬಿಕೆಗಳನ್ನು ದಲಿತ ಡಿ.ಸಿ..

ಹೀಗೆ ಮೇಲಿನ ಎಲ್ಲ ನಾಯಕರು ಪುರುಷರು. (ಕಮಲಾದಾಸ್ ಒಬ್ಬರನ್ನು ಬಿಟ್ಟರೆ) ಆದರೆ ಇವರನ್ನು ಕಾಣುವ ಮತ್ತು ಇವರ ಆದರ್ಶಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವ/ನಿಕಷಕ್ಕೆ ಒಡ್ಡುವ ಹೆಚ್ಚಿನವರು ಇಲ್ಲಿ ಮಹಿಳೆಯರಾಗಿರುವುದು ಆಶ್ಚರ್ಯದ ಸಂಗತಿ. ಇವುಗಳಿಗೆ ಅಪವಾದವಾದ ಸಬ್‌ಸಬಾಲ್ಟ್ರನ್ ಮತ್ತು ಗಾಂಧೀಜಿಯ ಕತೆಗಳಲ್ಲಿ ಕೂಡ, ದೇವರಾಜ ಅರಸರ ಹಾದಿಯಲ್ಲಿಯೇ ನಡೆದು ಆನಂತರದ ಚಿನ್ನಯ್ಯನ ಬದುಕಿನ ತಿರುವಿಗೆ ನಾಗರತ್ನಮ್ಮ ಕಾರಣವಾದರೆ, ಗಾಂಧೀಜಿಯ ಆದರ್ಶವನ್ನು ಅರಗಿಸಿ ಕೊಳ್ಳಲಾರದ ಸಿ.ಎಸ್. ಆಚಾರ್ಯನ ಐಲುತನವನ್ನು ಬಯಲು ಮಾಡುವವಳು ಅವನ ಹೆಂಡತಿ.

ನಮ್ಮ ಸಮಾಜದಲ್ಲಿ ಆದರ್ಶಗಳನ್ನು ಎತ್ತಿಹಿಡಿಯುವುದು, ಮೌಲ್ಯಗಳನ್ನು ಸಾರುವುದು ಹೆಚ್ಚಾಗಿ ಪುರುಷರ ಗುತ್ತಿಗೆ. ಸ್ತ್ರೀಯರಾದರೋ ಈ ನೆಲಕ್ಕೆ ಅಂಟಿದ ಕರ್ಮಯೋಗಿಗಳು. ಇಲ್ಲಿ ಅಂತಹ ಪ್ರಸಿದ್ಧ ಪುರುಷರ ಆದರ್ಶಗಳನ್ನು ಬದುಕುವವರು, ಅದನ್ನು ಮುಂದುವರೆಸುವವರು, ಪ್ರಶ್ನಿಸುವವರು ಮಹಿಳೆಯರಾಗಿದ್ದಾರೆ. ಇವರೆಲ್ಲಾ ಸ್ವಾತಂತ್ರ್ಯದ ಉಸಿರಾಡುತ್ತಾರೆ. ಇಲ್ಲಿ ಉತ್ಪ್ರೇಕ್ಷಿತವೂ ಅಲ್ಲದ ಉಪೇಕ್ಷಿತವೂ ಅಲ್ಲದ ಮಹಿಳೆಯರ ಬದುಕಿನ ಒಂದು ವಸ್ತುನಿಷ್ಠ ಗ್ರಹಿಕೆ ನಿರೂಪಕನಿಗೆ ದಕ್ಕಿದೆ. ಈ ಮೂಲಕ ಲೇಖಕರು, ಮೊದಲೇ ಹೇಳಿದ ಆದರ್ಶ ಮತ್ತು ಆಚರಣೆಯ ನಡುವೆ ಇರುವ ಕಂದರವನ್ನು ಈ ಮಹಿಳೆಯರ ಮೂಲಕ ಬೆಸೆಯಲು ಪ್ರಯತ್ನಿಸುತ್ತಿದ್ದಾರೇನೋ ಎಂದು ಎನಿಸುತ್ತದೆ. ಹಾಗೆ ನೋಡಿದರೆ, ಕೆ. ಸತ್ಯನಾರಾಯಣರು ಈವರೆಗಿನ ಸಮಗ್ರ ಕಥಾನಕದೊಳಗೆ ಮಹಿಳಾ ಪ್ರಪಂಚದ ಬಗೆಗೆ ಇಂತಹ ಒಂದು grey area ಇರುವುದನ್ನು ಗಮನಿಸಬಹುದು. ಮಹಿಳಾ ಲೋಕಕ್ಕೆ ಒಂದು ಅಘೋಷಿತವಾದ ಸಮಚಿತ್ತದ (equanimous) ಯಾತ್ರೆಯನ್ನು ಹೀಗೆ ಲೇಖಕನೊಬ್ಬ ಕೈಗೊಳ್ಳುವುದು ನಮ್ಮ ಸಾಂಸ್ಕೃತಿಕ ಪುನರ್ ನಿರ್ಮಾಣದ ದೃಷ್ಟಿಯಿಂದ ಅತ್ಯಂತ ಮಹತ್ವವಾದುದು. ❑



# ಲೈಂಗಿಕ ಕಿರುಕುಳಕ್ಕೊಂದು ಶೌರ್ಯ ಪ್ರಶಸ್ತಿ?

ಅನುವಾದ : **ಮಾಲತಿ ಶೆಣೈ**

ಆದಿವಾಸಿ ಶಾಲಾ ಶಿಕ್ಷಕಿ ಸೋನಿ ಸೋರಿ ಮೇಲೆ ಲೈಂಗಿಕ ಅತ್ಯಾಚಾರಕ್ಕೆ ಕಾರಣರಾದ, ಅಂಕಿತ್ ಗರ್ಗ್ ಎಸ್.ಪಿ, ದಾಂತೆವಾಡ ಛತ್ತಿಸಗಡ ಅವರಿಗೆ ರಾಷ್ಟ್ರಪತಿ ಪೋಲಿಸ್ ಶೌರ್ಯ ಪ್ರಶಸ್ತಿ ನೀಡಿದ್ದು ಮಹಿಳಾಪರ ಸಂಘಟನೆಗಳನ್ನು ಆಘಾತ ಹಾಗೂ ಸಿಟ್ಟಿಗೇಳಿಸಿದೆ. ಎಸ್ ಪಿ ಅಂಕಿತ್ ಗರ್ಗ್ ಅವರ ಉಸ್ತುವಾರಿಯಲ್ಲಿ ಅಕ್ಟೋಬರ್ 8, 2011 ರಂದು ಸೋನಿಯವರು ತನ್ನ ಮೇಲೆ ಚಿತ್ರಹಿಂಸೆ ಹಾಗೂ ಲೈಂಗಿಕ ಕಿರುಕುಳ ನೀಡಿದ್ದರ ಬಗ್ಗೆ ಸುಪ್ರೀಮ್ ಕೋರ್ಟ್‌ನಲ್ಲಿ ಆರೋಪಿಸಿದ್ದಾರೆ

ಸೋನಿಯವರು ಅಂಕಿತ ಗರ್ಗ್ ಬಗ್ಗೆ ಹಲವಾರು ದೂರುಗಳನ್ನು ಸುಪ್ರೀಮ್ ಕೋರ್ಟ್‌ಗೆ ಕಳುಹಿಸಿದ್ದಾರೆ. ಅವರು ದಾಂತೆವಾಡಾ ಕಾರಾಗ್ರಹದಲ್ಲಿದ್ದಾಗ ಎಸ್.ಪಿ. ಗರ್ಗ ಅವರ ಆದೇಶದ ಮೇರೆಗೆ ಸೋನಿಯವರನ್ನು ನಗ್ನಗೊಳಿಸಿ ವಿದ್ಯುತ್ ಶಾಕ್ ಕೊಟ್ಟಿದ್ದಾರೆ. ಅದಲ್ಲದೇ ಅವರ ಆದೇಶದಂತೆ ಸ್ವಾಮಿ ಅಗ್ನಿವೇಶ, ಮೇಧಾ ಪಾಟ್ಕರ್ ಮೊದಲಾದ ಸಾಮಾಜಿಕ ಕಾರ್ಯಕರ್ತರು ನಕ್ಸಲರು ಎಂದು ಸೋನಿ ಹೇಳಿಕೆ ನೀಡಲು ಒಪ್ಪದೆ ಇದ್ದುದರಿಂದ ಮೂವರು ಪೋಲಿಸ್ ಪೇದೆಯರಿಂದ ಲೈಂಗಿಕ ಕಿರುಕುಳ ನೀಡಿದ್ದಾರೆ. ಸ್ವಾತಂತ್ರ ಎನ್‌ಆರ್‌ಎಸ್ ಸರಕಾರಿ ಆಸ್ಪತ್ರೆ ನಡೆಸಿದ ತಪಾಸಣೆ ಸೋನಿಯವರ ಮೇಲೆ ಬಲಾತ್ಕಾರ ನಡೆದಿದ್ದು, ಅವರ ಗುಪ್ತಾಂಗದಲ್ಲಿ ಕಲ್ಲುಗಳನ್ನು ತುರುಕಿಸಿ ಹಿಂಸೆ ನೀಡಿದ್ದು ದೃಢಪಡಿಸಿದೆ. ಈ ಹಿನ್ನೆಲೆಯಲ್ಲಿ ಅವರ ವೈಯಕ್ತಿಕ ಹಿತದೃಷ್ಟಿಯಿಂದ ಸುಪ್ರೀಮ್ ಕೋರ್ಟ್ ಅವರನ್ನು ದಾಂತೆವಾಡಾ ಪೋಲಿಸ್ ಠಾಣೆಯಿಂದ ರಾಯಪುರ್ ಕೇಂದ್ರ ಕಾರಾಗೃಹಕ್ಕೆ ಅವರನ್ನು ರವಾನಿಸಲು ಆದೇಶ ನೀಡಿತ್ತು.

ಈ 'ಶೌರ್ಯ' ಪ್ರದರ್ಶನಕ್ಕೆ ಎಸ್.ಪಿ. ಅಂಕಿತ್ ಗರ್ಗ ಅವರಿಗೆ ಸರಕಾರ ಶೌರ್ಯ ಪದವಿ ನೀಡಿ ಪುರಸ್ಕರಿದೆಯೇ? ಕರುಣೆಯಿಲ್ಲದ ವರ್ತನೆಗೆ ಪುರಸ್ಕಾರ ನೀಡುತ್ತಿದೆಯೇ? ಸರಕಾರಕ್ಕೆ ಈ ವರ್ತನೆ ಉಚಿತ ಅನಿಸಿದೆಯೇ? ನಕ್ಸಲ್ –ವಿರೋಧಿ ಚಟುವಟಿಕೆ ನಿಗ್ರಹಿಸಲು ಕಂಡುಕೊಂಡ ದಾರಿ ಸರಿಯೆನಿಸಿದೆಯೆ? ಈ ಘಟನೆ ದೇಶ ವಿದೇಶದಾದ್ಯಂತ ಪ್ರಸಾರ ಹಾಗೂ ಖಂಡನೆಗೊಳಗೊಂಡಿದೆ. ಎಸ್.ಪಿ. ಗರ್ಗ ಅವರ ಅನುಚಿತ ವರ್ತನೆಯ ಬಗ್ಗೆ ವಿವಿಧ ಜನಪರ ಸಂಘಗಳು ದನಿ ಎತ್ತಿದರೂ ನಮ್ಮ ಸರಕಾರ ಅವರಿಗೆ ಈ ಪ್ರಶಸ್ತಿ ನೀಡಿದ್ದು ಎಷ್ಟು ಸರಿ? ಒಂದು ಕಡೆ ಸನ್ಮಾನ್ಯ ಸುಪ್ರೀಂಕೋರ್ಟ್ ಈ ವಿಷಯವನ್ನು ಖಂಡಿಸಿದೆ ಹಾಗೂ ಇನ್ನೂ ಈ ಕೇಸ್‌ನ ವಿಚಾರಣೆ ನಡೆಯುತ್ತಾ ಇದೆ. ಲೈಂಗಿಕ ಕಿರುಕುಳದಂತಹ ಹೀನ ಕೃತ್ಯದ ಆಪಾದನೆ ಎದುರಿಸುತ್ತಿರುವ ಎಸ್.ಪಿ. ಅಂಕಿತ ಗರ್ಗ ಅವರು ಉನ್ನತ ಹುದ್ದೆಯಲ್ಲಿದ್ದು ಓರ್ವ ಜವಾಬ್ದಾರಿಯುತ ಅಧಿಕಾರಿಯೆಂದು ಸೋನಿಯವರನ್ನು ಅವರ ವಶಕ್ಕೆ ನೀಡಲಾಗಿತ್ತು. ಆದರೆ ವೈದ್ಯಕೀಯ ತಪಾಸಣೆಯ ಆಧಾರದ ಮೇಲೆ ಅವರ ಮೇಲಿನ ಆಪಾದನೆಗಳೆಲ್ಲ ಪುರಾವೆ ಸಮೇತ ಸಿಕ್ಕಿವೆಯಾದರೂ ಸರಕಾರ ಅವರಿಗೆ ಈ ಶೌರ್ಯ ಪ್ರಶಸ್ತಿ ನೀಡಿ ಗೌರವಿಸಿದೆ. ವಿಚಾರಣೆ ನಡೆಯುತ್ತಿರುವಾಗಲೇ ಅವರ ಮೇಲಿನ ಆಪಾದನೆ ಪರಿಗಣಿಸದೇ ಅವರಿಗೆ ಪುರಸ್ಕಾರ ನೀಡಿದ್ದಕ್ಕೆ ಕೇಂದ್ರ ಹಾಗೂ ರಾಜ್ಯ ಸರಕಾರ ನಕ್ಸಲ್ ವಿರೋಧಿ ಚಟುವಟಿಕೆ ನಿಗ್ರಹಿಸುವ ನೆಪದಲ್ಲಿ ನಡೆಸಿದ್ದ ಲೈಂಗಿಕ ಕಿರುಕುಳವನ್ನು ಖಂಡಿಸಿದ್ದಾರೆ.

ಭಾರತದ ಪ್ರಜಾಪ್ರಭುತ್ವಕ್ಕೆ ಇಂದು ಕರಾಳ ದಿನ. ರಾಯಪುರ್ ಕಾರಾಗೃಹದಲ್ಲಿ ತನ್ನ ಮೇಲೆ ನಡೆದ ಹೀನಕೃತ್ಯದಿಂದ ಆರೋಗ್ಯ ತೀರ ಇಳಿಮುಖವಾಗಿದ್ದು, ಸಂಕಟಪಡುತ್ತ, ತನ್ನ ಕೇಸ್ ಯಾವಾಗ ಸುಪ್ರೀಂಕೋರ್ಟ್‌ನಲ್ಲಿ ಸಾದರಪಡಿಸಲಾಗುತ್ತಿದೆ ಎಂದು ಎದುರು ನೋಡುತ್ತಾ, ಮಹಿಳಾಪರ ಸಂಘಟನೆಗಳೊಂದಿಗೆ ಮಾತನಾಡಲಾಗದ ಸ್ಥಿತಿಯಲ್ಲಿ ತನ್ನನ್ನು ಕಿರುಕುಳ ನೀಡಿದ ಪೋಲಿಸ್ ಕಸ್ಟಡಿಯಲ್ಲೇ ಸೋನಿ ಕಾಲಕಳೆಯುತ್ತಿದ್ದಾರೆ.

ಈ ವರ್ಷ ಅತೀ ಹೆಚ್ಚು ಶೌರ್ಯ ಪ್ರಶಸ್ತಿಗಳು ಆ್ಯಂಟಿ ನಕ್ಸಲ್ ಹಾಗೂ ಕೌಂಟರ್ ಇನ್ಸರ್ಜೆನ್ಸಿ ಚಟುವಟಿಕೆಗಳಿಗೆ ನೀಡಲಾಗಿದ್ದು ನಮ್ಮನ್ನು ಅಧೀರಗೊಳಿಸಿದೆ. ಮಾನವ ಹಕ್ಕುಗಳ ಉಲ್ಲಂಘನೆ ಈ ಹೆಸರಿನಲ್ಲಿ ನಡೆಯುತ್ತಿದೆ ಎಂದು ಸಿವಿಲ್ ಲಿಬರ್ಟೀಸ್ ಸಂಸ್ಥೆಗಳು ಹೇಳುತ್ತ ಇವೆ. ಇವೆಲ್ಲ ಮುಂದೆ ನಮ್ಮ ದೇಶದಲ್ಲಿ ಘಟಿಸುವಂತ ಮಿಲಿಟರಿ ಆಡಳಿತಕ್ಕೆ ದಾರಿ ಮಾಡಿಕೊಡುತ್ತಿರುವ ಮುನ್ಸೂಚನೆಯಂತಿದೆ.

ಕಠೋರವಾದ ಶಬ್ದಗಳಿಂದ ಮಹಿಳಾಪರ ಸಂಘಟನೆಗಳು ಈ ಕಾರ್ಯವನ್ನು ಖಂಡಿಸುತ್ತಿವೆ. ನಕ್ಸಲ್ ವಿರೋಧಿ ಕೌಂಟರ್ ಇನ್ಸರ್ಜೆನ್ಸಿ ಹೆಸರಿನಲ್ಲಿ ಅತ್ಯಾಚಾರ ಲೈಂಗಿಕ ಕಿರುಕುಳ ನೀಡುತ್ತಿರುವುದನ್ನೂ ಖಂಡಿಸುತ್ತೇವೆ. ಇಂತಹ ಹೀನಾಕೃತ್ಯ ನಡೆಸಿರುವ ವ್ಯಕ್ತಿಗೆ ಇಂತಹ ಧೀಮಂತ ಪ್ರಶಸ್ತಿ ನೀಡಿರುವುದು ಆ ಪ್ರಶಸ್ತಿಗೆ ಮಾಡಿದ ಅವಮಾನವಾಗಿದೆ.

*(ಡಬ್ಲು.ಎಸ್.ಎಸ್. ಪರವಾಗಿ ಬರೆದ ಕರಪತ್ರ)*

# ಸೋನಿ ಸೋರಿ ಸುಪ್ರೀಂಕೋರ್ಟ್‌ಗೆ ಬರೆದ ಪತ್ರ

*ಸರ್,*

*ತಾ 08-10-2011 ಶನಿವಾರ ರಾತ್ರಿ ದಾಂತೇವಾಡಾದ ಹಳೆ ಪೋಲೀಸ್ ಸ್ಟೇಷನ್ ಪಕ್ಕ ಕಟ್ಟಿಸಿದ ಹೊಸ ಪೋಲೀಸ್ ಸ್ಟೇಷನ್‌ನಲ್ಲಿ ನನಗೆ ಚಿತ್ರಹಿಂಸೆ ನೀಡಿದರು. ಆ ರಾತ್ರಿ ನಾನು ಮಲಗಿದ್ದಾಗ, ಇಬ್ಬರು ಮಹಿಳಾ ಪೋಲೀಸ್ ಪೇದೆಗಳು ನನ್ನನ್ನು ಎಬ್ಬಿಸಿದರು. ನಾನು ಯಾಕೆ ಅಂತ ಕೇಳಿದಾಗ, 'ಎಸ್.ಪಿ. ಅಂಕಿತ್ ಗರ್ಗ್' ಬಂದಿದ್ದಾರೆ ಅಂತ ಹೇಳಲಾಯಿತು. ನನಗೆ ಬೇರೊಂದು ಕೋಣೆಗೆ ಕರೆದೊಯ್ಯಲಾಯಿತು. ಆ ಕೋಣೆಯಲ್ಲಿ ಎಸ್.ಪಿ. ಅಂಕಿತ ಗರ್ಗ್ ಹಾಗೂ ಕಿರಂದೂಲ್ ಪೋಲೀಸ್ ಸ್ಟೇಷನ್‌ನ ಎಸ್.ಡಿ.ಪಿ.ಓ ಕುಳಿತಿದ್ದರು. ಕೆಲ ಹೊತ್ತು ಆ ಕೋಣೆಯಲ್ಲಿ ಮಹಿಳಾ ಪೋಲೀಸ್ ಪೇದೆಗಳೊಂದಿಗೆ ನನ್ನನ್ನು ಸುಮ್ಮನೆ ಕುಳ್ಳಿರಿಸಿದರು.*

*ಕೆಲ ಸಮಯದ ನಂತರ ಆ ಮಹಿಳಾ ಪೋಲೀಸ್ ಪೇದೆಗಳನ್ನು ಕೋಣೆಯಿಂದ ಹೊರ ಕಳುಹಿಸಲಾಯಿತು. ಅವರು ಹೊರಗೆ ಹೋಗುತ್ತಿದ್ದಾಗ ಅವರಿಗೆ 'ಈ ಕೋಣೆಯಲ್ಲಿ ಏನು ನಡೆಯಿತೆಂದು ಹೊರ ಬಿದ್ದರೆ ನಿಮಗೆ ಏನಾಗುತ್ತದೆ ಎಂದು ಗೊತ್ತಲ್ಲವೆ' ಎಂಬ ಎಚ್ಚರಿಕೆ ನೀಡಲಾಯಿತು. ಅವರಿಬ್ಬರೂ 'ನಾವು ಯಾರಿಗೂ ಏನೂ ಹೇಳಲ್ಲ' ಅನ್ನುವ ಆಶ್ವಾಸನೆ ನೀಡಿದ ಮೇಲೆ ಅವರನ್ನು ಹೊರಗೆ ಕಳುಹಿಸಲಾಯಿತು.*

*ಇದಾದ ನಂತರ ಕಾನ್ಸ್‌ಟೇಬಲ್ ಮಂಕರ್ ಮತ್ತು ಬಸಂತ್ ಅವರನ್ನು ಕರೆಯಲಾಯಿತು. ಅವರು (ಅಂಕಿತ್) ಮಂಕರ್ ಅವರನ್ನು : 'ಹೇಗಾದರೂ ನಾನು ನಿಮ್ಮ ಜತೆ ಇದ್ದೇನೆ. ಈ ಹೆಣ್ಣುನಾಯಿ ನಿಮ್ಮನ್ನು ಏನು ಮಾಡಬಹುದು? ಈ ಪ್ಲಾನ್ ನಾವೆಲ್ಲ ಸೇರಿ ಮಾಡಿದ್ದು ಮತ್ತು ನಮ್ಮ ಯೋಜನೆ ಸಫಲ ಆಗ್ತಾ ಇದೆ." ಪುನಃ ಮಂಕರ್ ಅವರನ್ನು ಉದ್ದೇಶಿಸಿ, 'ಮಗ ನೀನು ಧೈರ್ಯದಿಂದ ವರ್ತಿಸಿದ್ದೀಯಾ. ನಿನ್ನ ಬಗ್ಗೆ ನನಗೆ ತುಂಬ ಸಂತೋಷ. ಕುನ್ನಿ, ನಿನಗೊತ್ತಾ ನಾನು ಯಾರು ಅಂತ? ನಾನು ಎಸ್.ಪಿ. ಅಂಕಿತ್ ಗರ್ಗ್. ಮೊದಲು ಬಿಜಾಪುರದಲ್ಲಿದ್ದೆ. ಮತ್ತೀಗ ಶೀಘ್ರದಲ್ಲೇ ನನಗೆ ಪ್ರಮೋಶನ್ ಆಗಲಿದೆ. ಇನ್ನೂ ದೊಡ್ಡ ಹುದ್ದೆ ನನ್ನದಾಗಲಿದೆ." ಟೇಬಲ್ ಮೇಲೆ ಕುಟ್ಟಿ, ಇಲ್ಲಿಂದ ಇನ್ನು ಎಲ್ಲ ಶುರು. ನಾವು ಏನನ್ನು ಆದೇಶಿಸುತ್ತೇವೋ ಅದನ್ನು ಮಾಡಲಾಗುವುದು. ನಾವೇ ಈಗ ಆಡಳಿತವರ್ಗ, ಕಾರ್ಯಕಾರಿ ಸಮಿತಿ, ಸರಕಾರ... "ಮಂಕರ್‌ನ ಹೆಸರಿಗೆ ಹೇಗೆ ಮಸಿ ಬಳಿತೀಯಾ?. ಅವನಿಗೆ ಬಡ್ತಿ ಸಿಗುತ್ತಿದೆ"*

*ತುಂಬ ಹೊತ್ತು ನನ್ನ ಮೇಲೆ ಹೀನಾಯ ಭಾಷೆಯ ಪ್ರಯೋಗ ಮಾಡಿದರು ಮತ್ತು ನನ್ನನ್ನು ಮಾನಸಿಕವಾಗಿ ಜರ್ಝರಿತ ಗೊಳಿಸಿದರು. ನನ್ನ ಹಿಂದಿನ ಪತ್ರದಲ್ಲಿ ಇದನ್ನು ನಮೂದಿಸಿದ್ದೇನೆ. ಆ ಪತ್ರ ಈಗಾಗಲೇ ನಿಮ್ಮ ಕೈಸೇರಿದೆ ಎಂದು ಭಾವಿಸುತ್ತೇನೆ. ಅವರ ದುರ್ವರ್ತನೆ ಬಗ್ಗೆ ಇಲ್ಲಿ ಬರೆಯಲಾಗುವುದಿಲ್ಲ. ಯಾವುದೋ ಕಾಗದ ನೀಡಿ ನನ್ನನ್ನು ಅದರ ಮೇಲೆ ಸಹಿ ಹಾಕಲೂ ಹಾಗೂ ಇನ್ನೇನನ್ನೋ ಬರೆಯಲು ಒತ್ತಾಯಪಡಿಸಲಾಯಿತು. ನಾನು ನಿರಾಕರಿಸಿದಾಗ ನನ್ನ ಮೇಲೆ ಕಠಿಣ ಮಾತುಗಳಿಂದ ಒತ್ತಡ ಹೇರಲಾಯಿತು. ಆಗಲೂ ನಾನು ನಿರಾಕರಿಸಿದಾಗ ನನ್ನ ಅಂಗಾಲು, ಕಾಲು ಹಾಗೂ ಬಟ್ಟೆಯ ಮೇಲೆ ವಿದ್ಯುತ್ ಶಾಕ್ ಕೊಡಲಾಯಿತು. ಕೆಲ ಸಮಯದ ನಂತರ ಇದನ್ನು ನಿಲ್ಲಿಸಿ ಹೀಗೆ ಹೇಳಿದರು. 'ನಾವು ಹೇಳಿದ್ದನ್ನು ಮಾಡು. ನಿನ್ನ ಹಿತ ಇದರಲ್ಲೇ ಇದೆ. ನೀನು ಸುರಕ್ಷಿತವಾಗಿರ್ತೀಯ. ಗೊತ್ತಾಯ್ತಾ? ಈಗ ನೀನು, ಹಿಮಾಂಶು, ಸ್ವಾಮಿ ಅಗ್ನಿವೇಶ, ಪ್ರಶಾಂತ ಭೂಶನ್, ಕಾಲಿನ್, ಲಿಂಗರಾಮ್, ಕವಿತ ಶ್ರೀವಾತ್ಸವ್, ಮೇಧಾ ಪಾಟ್ಕರ್, ಅರುಂಧತಿ ರಾಯ್, ನಂದಿನಿ ಸುಂದರ್, ಮನೀಶ್ ಕುಂಜಮ್, ರಮಾ ಸೋಧಿ, ಎಸ್ಸಾರ್ ಕಂಪನಿಯ ಮಾಲೀಕ, ಇವರೆಲ್ಲ ನಕ್ಸಲ್ ಆಶ್ರಿತರು ಅಂತ ಬರೆದು ಕೊಡಬೇಕು. ಎಲ್ಲ ವಿಷಯಗಳನ್ನು ನಾನು ಮತ್ತು ಲಿಂಗ ದೆಹಲಿಗೆ ರವಾನಿಸುತ್ತಿದ್ದೆವು. ಅವರ ಹೇಳಿಕೆ ಪ್ರಕಾರ ನಾನು ದೆಹಲಿಗೆ ಬಂದಿದ್ದೆ. ಎಸ್ಸಾರ್ ಕಂಪನಿಯವರು ಮನೀಶ ಕುಂಜಮ್, ರಮಾ ಸೋಧಿ ಹಾಗೂ ನನ್ನ ಮೂಲಕ ಹಣವನ್ನು ನಕ್ಸಲರಿಗೆ ರವಾನಿಸುತ್ತಿದ್ದರು. ಹೀಗೆ ನಾನು ನಕ್ಸಲರನ್ನು ಸಹಾಯ ಮಾಡುತ್ತಿದ್ದೆ' ಹೀಗೆ ಇನ್ನೂ ಹಲವಾರು ವಿಷಯಗಳನ್ನು ಕುರಿತಂತೆ ನನಗೆ ಪತ್ರವನ್ನು ಬರೆಯಲು ಹೇಳಿದರು*

*ನಾನು ಈ ತರಹದ ಯಾವುದೇ ಪತ್ರ ಬರೆದಿಲ್ಲ ಅಥವಾ ಸಹಿ ಹಾಕಿರುವುದಿಲ್ಲ. 'ನಾಯಿ, ನಾವು ಬರೆದ ಪತ್ರದ ಮೇಲೆ ಸಹಿ ಹಾಕು' ಅಂತ ಅಪಾರವಾದ ಒತ್ತಡ ಹೇರಲಾಯಿತು. 'ನಾನು ಸಾಯಲು ಸಿದ್ಧಳಿದ್ದೇನೆ ಆದರೆ ನಾನು ಯಾವುದೇ ಅಪರಾಧ ಎಸಗಿಲ್ಲ ಮತ್ತು ನೀವು ಹೇಳಿದ ಅಷ್ಟೂ ಜನರ ಹೆಸರನ್ನೂ ನಾನು ಬರೆಯಲ್ಲ ನನ್ನನ್ನು ಸಾಯಿಸಿದರೆ ಒಳ್ಳೆಯದು' ಅಂತ ಹೇಳಿದೆ. ಅದಕ್ಕೆ ಅವರು, "ಅದನ್ನು ನಾವು ಮಾಡಬಹುದಿತ್ತು, ಆದರೆ ನಿನ್ನನ್ನು ದೆಹಲಿಯಲ್ಲಿ ಸೆರೆಹಿಡಿದಿದ್ದರಿಂದ ಈಗ ನಾವು ನಿನ್ನನ್ನು ಕೊಲ್ಲಲು ಆಗಲ್ಲ. ನೀನು ನನ್ನ ಆಜ್ಞೆಯನ್ನು ಪಾಲಿಸುತ್ತಿಲ್ಲವೆಂದು, ನಿನ್ನನು ಶಿಕ್ಷೆಗೆ ಗುರಿಪಡಿಸಿ ಕಳುಹಿಸಲಾಗುವುದು. ನಿನ್ನ ಬಗ್ಗೆ ನಿನಗೆ ಎಷ್ಟು ಅಸಹ್ಯವಾಗುವುದು ಎಂದರೆ ನೀನು ಸೆರೆಮನೆಯ ಗೋಡೆಗಳಿಗೆ ನಿನ್ನ ತಲೆ ಒಡೆದುಕೊಂದು ಸಾಯುತ್ತೀಯ. ನೀನು ಸುಶಿಕ್ಷಿತ ಹೆಂಗಸು, ಅವಮಾನದ ಜತೆ ನೀನು ಬಾಳಲಾಗುವುದಿಲ್ಲ."*



*ಇಂತಹುದೆಲ್ಲ ಮಾತುಗಳನ್ನು ಹೇಳಿ ಮತ್ತೇ ನನಗೆ ವಿದ್ಯುತ್ ಶಾಕ್ ನೀಡಲು ಆದೇಶಿಸಿದರು. ಪದೇ ಪದೇ ವಿದ್ಯುತ್ ಶಾಕ ನೀಡಿದ ನಂತರ ನನ್ನ ಬಟ್ಟೆಗಳನ್ನು ಕಳಚಲಾಯಿತು. ಕುರ್ಚಿ ಮೇಲೆ ಕೂತು ಇದನ್ನೆಲ್ಲ ನೋಡುತ್ತ ಕುಳಿತಿದ್ದರು ಎಸ್.ಪಿ. ಅಂಕಿತ್ ಗಾರ್ಗ. ಅವ್ಯಾಚ ಶಬ್ದಗಳಿಂದ ನನ್ನನ್ನು ಉದ್ದೇಶಿಸಿ ನನ್ನನ್ನು ಅವಮಾನ ಮಾಡುತ್ತಲಿದ್ದರು. ಸ್ವಲ್ಪ ಸಮಯ ಬಿಟ್ಟು ಅವರು ಹೊರ ಹೊರಟರು ಮತ್ತು ಮೂರು ಜನ ಹುಡುಗರನ್ನು ಒಳಗೆ ಕಳುಹಿಸಿದರು. ಈ ಹುಡುಗರು ನನ್ನನ್ನು ಮುಟ್ಟಿ, ನನ್ನನ್ನು ಕೆಳಗೆ*

ಬೀಳುವ ಹಾಗೆ ದೂಡಿದರು. ಆ ಮೇಲೆ ನನ್ನ ಗುಪ್ತ ಪ್ರದೇಶದಲ್ಲಿ ವಸ್ತುಗಳನ್ನು ಹಾಕಿ ನೋವು ಮಾಡಿದರು. ಪ್ರಜ್ಞೆ ತಪ್ಪುವಷ್ಟು ನೋವಾಯಿತು. ಪ್ರಜ್ಞೆ ಮರಳಿದ ಮೇಲೆ, ನಾನು ಈ ಮೊದಲು ಇದ್ದ ಕೋಣೆಯಲ್ಲೇ ಇದ್ದೆ. ಆಗಲೇ ಬೆಳಗೂ ಆಗಿತ್ತು.

ಭಾನುವಾರ, 9–10–2011, ನನ್ನ ನೋವನ್ನು ನನ್ನಷ್ಟಕ್ಕೆ ನುಂಗಿಕೊಂಡೆ. ಯಾರ ಬಳಿ ಹೇಳಿಕೊಳ್ಳಬೇಕೆನಿಸಿದರೂ ಅಲ್ಲಿ ನನ್ನ ಪರವಾಗಿ ಯಾರೂ ಇರಲಿಲ್ಲ. ಸೋಮವಾರ 10–10–2011, ಮಹಿಳಾ ಪೋಲಿಸ್ ಪೇದೆಗಳು ಬಂದು ಕೋರ್ಟ್‌ಗೆ ಹೋಗಲು ನನ್ನನ್ನು ಸ್ವಚ್ಛವಾಗಿ ಬರಲು ಹೇಳಿದರು. ನಾನು ಅವರಿಗೆ , 'ಮ್ಯಾಡಂ, ನನಗೆ ತಲೆ ತಿರುಗುತ್ತಿದೆ, ನನಗೆ ಮೈಯಲ್ಲಿ ಶಕ್ತಿಯಿಲ್ಲ, ಸ್ವಲ್ಪ ಸಮಯ ಕಾಯಿರಿ" ಅಂದೆ. ಅದಕ್ಕೆ ಅವರು, "ಇಲ್ಲಿ ಬೇಗ ಬೇಗ ತಯಾರಾಗಲು ಹೇಳಿ ಕಳುಹಿಸಿದ್ದಾರೆ ಇಲ್ಲದಿದ್ದರೆ ನಮಗೆ ಬೈಗಳು ಸಿಗುತ್ತವೆ'. ಆಗ ನಾನು ನನಗೆ ಒಂದು ಕಪ್ ಚಹ ಕೊಡಲು ಕೇಳಿದೆ. ಚಹ ಕುಡಿದ ನಂತರ ನಾನು ನಿಧಾನವಾಗಿ ಎದ್ದು ಬಾತ್ ರೂಮ್‌ಗೆ ಹೋದೆ. ಅಲ್ಲಿ ನಾನು ತಲೆ ತಿರುಗಿ ಬಿದ್ದು ಬಿಟ್ಟೆ. ನನ್ನ ಮೈಯಲ್ಲಿ ನಿಶ್ಶಕ್ತಿಯಿದ್ದರು ಬಲವಂತವಾಗಿ ಫ್ರೆಶ್ ಆಗಿ ಬರಲು ಹೇಳಿದ್ದರು. ಬಹುಶಃ ನನ್ನನ್ನು ಒಳ್ಳೆ ಸ್ಥಿತಿಯಲ್ಲಿ ಇಟ್ಟಿದ್ದಾರೆಂದು ಅವರಿಗೆ ಸಾಬೀತು ಪಡಿಸಬೇಕಾಗಿತ್ತು ಅನ್ನಿಸುತ್ತೆ. ನಾನು ಬಾತ್ ರೂಮ್‌ನಲ್ಲಿ ಬಿದ್ದೆ, ಕೂಡಲೆ ನನಗೆ ಪ್ರಜ್ಞೆ ತಪ್ಪಿತು. ಅವರು ನನ್ನನ್ನು ದಾಂತೆವಾಡಾ ಪೋಲಿಸ್ ಸ್ಟೇಷನ್‌ನಿಂದ ದಾಂತೆವಾಡಾ ಆಸ್ಪತ್ರೆಗೆ ಕೊಂಡೊಯ್ದರು. ಪ್ರಜ್ಞೆ ಮರಳಿದ ನಂತರ ನನ್ನ ನೋವು ದ್ವಿಗುಣ ಗೊಂಡಿತ್ತು. ನಿಲ್ಲುವುದು ಬಿಡಿ, ಮಲಗಿದ್ದಲ್ಲಿಂದ ಏಳಲು ಕಷ್ಟವಾಗಿತ್ತು. ಸಂಪೂರ್ಣ ಜರ್ಝರಿತಳಾಗಿದ್ದೆ.

ಅಲ್ಲಿಯತನಕ ನನ್ನ ಮೇಲೆ ನಡೆದ ದೌರ್ಜನ್ಯದ ಬಗ್ಗೆ ನಾನು ಯಾರಲ್ಲೂ ಹೇಳಿಕೊಂಡಿರಲಿಲ್ಲ. ನನ್ನನ್ನು ಭೀತಿಗೆ ಒಳಪಡಿಸಲಾಗಿತ್ತು. ಆದರೂ ನಾನು ನನಗೆ ನೀಡಿದ ಕಿರುಕುಳದ ಬಗ್ಗೆ ಮಾತನಾಡಲು ಅವಕಾಶಕ್ಕಾಗಿ ಕಾದಿದ್ದೆ. ಆದರೆ ನನ್ನ ಸುತ್ತಮುತ್ತ ಪೋಲಿಸರ ಪಹರೆ ಯಾವಾಗಲೂ ಇರುತ್ತಿತ್ತು. ಆ ಮೇಲೆ ಸಾಧಾರಣ 2 ಗಂಟೆಗೆ ನನ್ನನ್ನು ಮಲಗಿದ ಸ್ಥಿತಿಯಲ್ಲೇ ಪೋಲಿಸ್ ವ್ಯಾನ್‌ನಲ್ಲಿ ಕೋರ್ಟ್‌ಗೆ ಒಯ್ಯಲಾಯಿತು. ಹೆಚ್ಚು ಹೊತ್ತು ಕೋರ್ಟ್‌ನ ಒಳಗಡೆ ಬಿಡದೆ, ನಮ್ಮನ್ನು ಹೊರಗಡೆ ನಿಲ್ಲಿಸಲಾಯಿತು. ಎಸ್‌ಡಿಪಿಒ ಕೋರ್ಟ್‌ನಿಂದ ಕೆಲವು ಕಾಗದಗಳನ್ನು ತಂದು ಅದರ ಮೇಲೆ ಸಹಿ ಹಾಕಲು ಹೇಳಿದರು. ನಾನು ಕೋರ್ಟ್ ನಲ್ಲಿ ಜಡ್ಜ್ ಎದುರಲ್ಲಿ ನನ್ನ ಹೇಳಿಕೆ ನೀಡಲು ಕೇಳಿಕೊಂಡೆ. 'ಅದೆಲ್ಲ ಆಮೇಲೆ. ಈ ಎಲ್ಲ ಕಾಗದಗಳು ನಿನ್ನನ್ನು ಜೈಲಿಗೆ ಹಾಕಲು' ಅಂದಾಗ ನಾನೇನು ಮಾಡಲು ಸಾಧ್ಯ? ಜೈಲಿಗೆ ಹೋಗುವುದೇ ಒಳಿತೆಂದು ನಾನೂ ಸುಮ್ಮನಾದೆ. ಮಹಿಳಾ ಜಡ್ಜ್ ನನ್ನ ಹೇಳಿಕೆಯನ್ನು ಕೇಳಿಸಿಕೊಳ್ಳಲೇ ಇಲ್ಲ, ನನ್ನನ್ನು ಮಾತನಾಡಿಸಲೂ ಇಲ್ಲ, ಹಾಗೆ ನನ್ನನ್ನು ಕಾರಾಗ್ರಹಕ್ಕೆ ಕಳುಹಿಸಲಾಯಿತು.

ಕೋರ್ಟ್‌ನಿಂದ ನನಗೆ ದಾಂತೆವಾಡೆ ಪೋಲಿಸ್ ಸ್ಟೇಶನ್‌ಗೆ ತರಲಾಯಿತು. ಅಲ್ಲಿ ಇಬ್ಬರು ಆಗಲೆ ಹಾಜರ್ ಇದ್ದರು. ನನ್ನ ಕಷ್ಟಗಳನ್ನು ನೋಡಿಯೂ ನನ್ನನ್ನು ಕವಿತಾ ಶ್ರೀವಾತ್ಸವ ಬಗ್ಗೆ ಪ್ರಶ್ನಿಸಲಾರಂಭಿಸಿದರು. 'ನನಗೆ ಹುಷಾರಿಲ್ಲ, ನಾನು ಮಾತನಾಡುವ ಸ್ಥಿತಿಯಲ್ಲಿಲ್ಲ' ಅಂದೆ. 'ದಯವಿಟ್ಟು ನನ್ನನ್ನು ಬಲವಂತ ಪಡಿಸಬೇಡಿ.' ಅಷ್ಟು ಹೊತ್ತಿಗೆ ನನ್ನ ಸಹೋದರ ರಾಮದೇವ್ ನನ್ನ ಕುಟುಂಬದ ಇತರ ಸದಸ್ಯರೊಂದಿಗೆ ದಾಂತೆವಾಡಾ ಪೋಲಿಸ್ ಸ್ಟೇಶನ್‌ಗೆ ಬಂದಿದ್ದ. "ನನ್ನ ತಂಗಿಯನ್ನು ಇಲ್ಲಿಗೇಕೆ ತಂದಿದ್ದೀರಿ? ಅವಳಿಗೆ ಜೈಲಿಗೆ ಒಯ್ಯಲು ಕೋರ್ಟ್ ಆದೇಶಿಸಿದೆಯಲ್ಲವ?" ಅಂತ ಕೇಳಲಾರಂಭಿಸಿದ. ಕೂಡಲೆ ನನ್ನನ್ನು ಅಲ್ಲಿಂದ ಜಗದಾಲ್‌ಪುರ್‌ಗೆ ಒಯ್ಯಲಾಯಿತು. ಜಗದಾಲ್‌ಪುರ್ ಕೇಂದ್ರೀಯ ಕಾರಾಗ್ರಹಕ್ಕೆ ಸಂಜೆ 7–8 ಆಸುಪಾಸಿಗೆ ತಲುಪಿದೆವು. ನನ್ನ ಸ್ಥಿತಿಯನ್ನು ನೋಡಿ ಕಾರಾಗ್ರಹದ ಸಿಬ್ಬಂದಿ ನನ್ನನ್ನು ಒಳ ಒಯ್ಯಲು ಒಪ್ಪಲಿಲ್ಲ. ಆಮೇಲೆ ಅಲ್ಲಿನ ಗಾರ್ಡ್ (ಹೆಸರು ಗೊತ್ತಿಲ್ಲ) ನನ್ನನ್ನು ಜಗದಾಲ್‌ಪುರ್ ಆಸ್ಪತ್ರೆಗೆ ಸೇರಿಸಿದರು. ಅಲ್ಲಿ ನನ್ನನ್ನು ಉಪಚರಿಸಲಾಯಿತು. ಆಮೇಲೆ, ಮಂಗಳವಾರ, 11–10–2011 ರಂದು ಜಗದಾಲ್‌ಪುರ್ ಆಸ್ಪತ್ರೆಯ ವೈದ್ಯರು ನನ್ನನ್ನು ರಾಯಪುರ್ ಆಸ್ಪತ್ರೆಗೆ ಒಯ್ಯಲು ಸಲಹೆ ನೀಡಿದರು. ಆ ದಿನ ರಾತ್ರಿ 10–11 ಗಂಟೆಯ ಹೊತ್ತಿಗೆ ನಾವು ರಾಯಪುರಕ್ಕಾಗಿ ಊರು ಬಿಟ್ಟು, ಬುಧವಾರ, 12–10–2011ರ ಬೆಳಿಗ್ಗೆ ರಾಯಪುರ್‌ನಲ್ಲಿದ್ದೆವು. ಅಲ್ಲಿ ನನ್ನನ್ನು ಉಪಚರಿಸಲಾಯಿತು. ರಾಯ್‌ಪುರ್‌ನ ಕಾರಾಗ್ರಹದ ಗಾರ್ಡ್ ವೈದ್ಯರನ್ನು ಬಲವಂತಪಡಿಸಿ ನನ್ನನ್ನು ರಾಯ್‌ಪುರಕ್ಕೆ ಕಳುಹಿಸುವಂತೆ ಮಾಡಿದರು. ನನ್ನನ್ನು ರಾಯಪುರ್ ಕೇಂದ್ರ ಕಾರಾಗ್ರಹಕ್ಕೆ ತಂದಾಗ ಸಮಯ 8–9 ಆಗಿರಬಹುದು. ನಾನು ತುಂಬ ನೋವಿನಲ್ಲಿದ್ದೇನೆ, ನನಗೆ ಔಷದೋಪಚಾರದ ಅವಶ್ಯಕತೆ ಇದೆ ಎಂದು ಹೇಳಲು ಪ್ರಯತ್ನಿಸಿದೆ, ಆದರೂ ನನ್ನನ್ನು ಬಲವಂತವಾಗಿ ಕಾರಾಗ್ರಹಕ್ಕೆ ತಂದು ಬಿಟ್ಟಿದ್ದರು. "ನೀನು ಕೆಂಪು ದ್ವಾರ ಕಂಡ ತಕ್ಷಣ ಬೇಗ ಗುಣಮುಖಳಾಗುತ್ತೀಯ' ಅಂದರು. ನಾನು ನಡೆಯುವ ಸ್ಥಿತಿಯಲ್ಲೇ ಇರಲಿಲ್ಲ ಆದರೂ ಕಷ್ಟಪಟ್ಟು ಕಾರಾಗ್ರಹದ ದ್ವಾರ ತಲುಪಿದೆ.

–ಸೋನಿ ಸೂರಿ





# 'ರಾಮ ಕೊನೆಗೂ ಒಂಟಿ'

■ ಭಾಗೇಶ್ರೀ

ಚರಿತ್ರ ಎಷ್ಟೇ ಹುತ್ತಗಟ್ಟಿದರೂ ಪುರುಷೋತ್ತಮ ರಾಮನ ಬಗ್ಗೆ ಒಳ್ಳೆಯ ಮಾತು ಆಡುವುದು ಕಷ್ಟವೇ. ಆಧುನಿಕ ವಿಮರ್ಶಕರು –ವಿಶೇಷವಾಗಿ ಮಹಿಳಾ ಮತ್ತು ಶೂದ್ರ/ದಲಿತ ವಿಮರ್ಶಕರು–ಇವನ ಬಗ್ಗೆ ಬೇಕಾದಷ್ಟು ತಕರಾರು ತೆಗೆದಿದ್ದಾರೆ. ಎಪ್ಪತ್ತರ ದಶಕದಲ್ಲಿ ರಂಗನಾಯಕಮ್ಮ ಬರೆದ "ರಾಮಾಯಣ ವಿಷವೃಕ್ಷಂ"ನಿಂದ ಹಿಡಿದು ಮೀನಾ ಕಂದಸಾಮಿಯ ಇತ್ತೀಚಿನ ಪದ್ಯ "ರಾಂಡಮ್ ಏಕ್ಸೆಸ್ ಮ್ಯಾನ್"ವರೆಗೆ ರಾಮನ ದೈವತ್ವ ಮತ್ತು ಪೌರುಷದ ಕಲ್ಪನೆಯನ್ನು ಜಾಲಾಡುವ ಕೆಲಸವನ್ನು ಅನೇಕರು ಮಾಡುತ್ತಲೇ ಬಂದಿದ್ದಾರೆ. ಸೀತಾ ಪರಿತ್ಯಾಗ, ವಾಲಿ ವಧೆ, ಶಂಭೂಕ ವಧೆ... ಇತ್ಯಾದಿ ಘಟನೆಗಳು ಮತ್ತೆಮತ್ತೆ ವಿಶೇಷವಾಗಿ ಚರ್ಚೆಗೊಳಗಾಗಿವೆ.

ಆದರೆ ಇದುವರೆಗೆ ಯಾರೂ ರಾಮನನ್ನು ಒಬ್ಬ ಮನೋವಿಜ್ಞಾನಿಯ ಕೌಚ್‌ನ ಮೇಲೆ ಮಲಗಿಸಿ ರಾಮ ಹೀಗಾದದ್ದು ಹೇಗೆ ಅನ್ನುವ ಪ್ರಶ್ನೆ ಎತ್ತಿರಲಿಲ್ಲ. ಈ ಕೆಲಸವನ್ನು ಆರ್ಶಿಯಾ ಸತ್ತಾರ್ "ಲಾಸ್ಟ್ ಲವ್" ಎಂಬ ಪುಸ್ತಕದಲ್ಲಿ (ಪೆಂಗ್ವಿನ್ ಪ್ರಕಾಶನ) ಮಾಡಿದ್ದಾರೆ. ರಾಮನ ಭಜನೆ ಹಾಗು ಭಂಜನೆ ಎರಡೂ ಅಲ್ಲದ ಈ ಮೂರನೆಯ ಮಾರ್ಗದ ಓದು ಕುತೂಹಲ ಹುಟ್ಟಿಸುವಂತದ್ದು. ಅನುವಾದಕಿ ಮತ್ತು ಸಂಸ್ಕೃತದ ಪಂಡಿತೆಯೂ ಆಗಿರುವ ಆರ್ಶಿಯಾ ವಾಲ್ಮೀಕಿ ರಾಮಾಯಣ ಮತ್ತು ಕಥಾಸರಿತ್ಸಾಗರಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದಾರೆ. "ಲಾಸ್ಟ್ ಲವ್" ವಾಲ್ಮೀಕಿ ಇಂಗ್ಲಿಷಿಗೆ ರಾಮಾಯಣದ ವಿವಿಧ ಮುಖಗಳನ್ನು ಮನೋವೈಜ್ಞಾನಿಕ ಭೂಮಿಕೆಯಿಂದ ನೋಡುವ ಪ್ರಯತ್ನ.

ರಾಮನನ್ನು ಒಂದಕ್ಕೊಂದು ವಿರೋಧವಾದ ಸೆಳೆತಗಳಿಗೆ ಸಿಕ್ಕಿ –ದೈವತ್ವ ಮತ್ತು ಮನುಷ್ಯತ್ವ, ವೈಯಕ್ತಿಕ ಮತ್ತು ಸಾರ್ವಜನಿಕ ನಿರೀಕ್ಷೆಗಳು, ಸಾತ್ವಿಕ ಕಾಷಾಯ ವಸ್ತ್ರ ಮತ್ತು ಕ್ಷತ್ರಿಯ ಆಯುಧಗಳು... ಇತ್ಯಾದಿ – ಜರ್ಜರಿತನಾದ, ಕೊನೆಗೆ ಹಾಗೂ ಇಲ್ಲದೆ ಹೀಗೂ ಇಲ್ಲದೆ ಎಲ್ಲವನ್ನೂ ಕಳಕೊಂಡು ನಿಲ್ಲುವ ದುರಂತ ನಾಯಕನ ಹಾಗೆ ಆರ್ಶಿಯಾ ಚಿತ್ರಿಸುತ್ತಾರೆ.

ವಾಲ್ಮೀಕಿ ರಾಮಾಯಣವನ್ನು ಅನುವಾದ ಮಾಡುವ ಸಂದರ್ಭದಲ್ಲಿ ಸ್ತ್ರೀವಾದಿಯಾದ ತನ್ನನ್ನು ರಾಮನ ವ್ಯಕ್ತಿತ್ವ ಮತ್ತೆ ಮತ್ತೆ ಸೆಳೆದದ್ದು ಯಾಕೆ ಅನ್ನುವ ಪ್ರಶ್ನೆಯನ್ನು ಕೇಳಿಕೊಂಡಾಗ ಹುಟ್ಟಿದ ಯೋಚನೆಗಳು ಈ ಪುಸ್ತಕದ ಹುಟ್ಟಿಗೆ ಕಾರಣ ಅನ್ನುತ್ತಾರೆ ಆರ್ಶಿಯಾ. ತನ್ನಂಥ ಆಧುನಿಕ ಮಹಿಳೆಯರು ರಾಮನನ್ನು ಸಾರಾಸಗಟಾಗಿ ತಳ್ಳಿ ಹಾಕುವುದಕ್ಕಿಂತ ಈ ದೃಷ್ಟಿಯಿಂದ ನೋಡಲು ಹೊರಟಾಗ ಕಾಣುವ ಒಳನೋಟಗಳು ಬೇರೆ ಮತ್ತು ಹೆಚ್ಚು ಸಂಕೀರ್ಣವಾದದ್ದು ಅನ್ನುವುದು ಆರ್ಶಿಯಾ ಅಭಿಪ್ರಾಯ. "ರಾಮನ ಕತೆ ಕುತೂಹಲ ಹುಟ್ಟಿಸುವುದು ರಾಮ ಅಕಳಂಕ ಅನ್ನುವ ಕಾರಣಕ್ಕಲ್ಲ, ಅದರ ತದ್ವಿರುದ್ಧ ಕಾರಣಕ್ಕೆ. ಧರ್ಮವನ್ನು ಎತ್ತಿ ಹಿಡಿಯಲೆಂದೇ ಹುಟ್ಟಿದ ರಾಮ ವಿವರಿಸಲಸಾಧ್ಯವಾದಂತಹ ರೀತಿಯಲ್ಲಿ ಧರ್ಮದಿಂದ ವಿಮುಖನಾಗುತ್ತಾ ಹೋಗುವ ಪರಿಯೇ ಕುತೂಹಲಕಾರಿ," ಎಂದು ವಾದಿಸುತ್ತಾರೆ ಆರ್ಶಿಯ.

ರಾಮ ತಾನು ಯಾರು ಮತ್ತು ತನ್ನ ಆಯ್ಕೆಗಳು ಹೇಗಿರಬೇಕು ಅನ್ನುವ ಪ್ರಶ್ನೆಗೆ ಶೇಕ್ಸ್‌ಪಿಯರ್‌ನ ಹ್ಯಾಮ್ಲೆಟ್‌ನಂತೆ ತೊಳಲಾಡುವ ಅನೇಕ ಸಂದರ್ಭಗಳನ್ನು ಆರ್ಶಿಯ ತೆರೆದಿಡುತ್ತಾರೆ. ತನ್ನ ಆಯ್ಕೆ ದೇವರಾಗಿಯೋ ಅಥವಾ ಮನುಷ್ಯನಾಗಿಯೋ, ಮಗನಾಗಿಯೋ ಅಥವಾ ತನ್ನತನವಿರುವ ವ್ಯಕ್ತಿಯಾಗಿಯೋ, ಗಂಡನಾಗಿಯೋ ಅಥವ ರಾಜನೈತಿಕ ಲೆಕ್ಕಾಚಾರಗಳ ರಾಜನಾಗಿಯೋ, ಧರ್ಮಭೀರುವಾಗಿಯೋ ಅಥವಾ ರಾಜಕೀಯ ಕಾರಣಕ್ಕೆ ಧರ್ಮ ಮೀರುವವನಾಗಿಯೋ... ಅನ್ನುವ ಅನುಮಾನಗಳು ರಾಮನಿಗೆ ಸತತ ಕಾಡಿವೆ ಅನ್ನುತ್ತಾರೆ. ಕಾಷಾಯ ವಸ್ತ್ರ ಧರಿಸಿ ಕೈಯ್ಯಲ್ಲಿ ಬಿಲ್ಲು ಬಾಣ ಹಿಡಿದ ಇವನ ರೂಪವನ್ನೇ ಈ ಎಲ್ಲಾ ವಿರೋದಾಭಾಸಗಳ ಸಂಕೇತ ಎನ್ನಬಹುದು. ಕೈಕೇಯಿಯ ಮಾತು ಕೇಳಿದ್ದರಿಂದ "ಅಮ್ಮಾವ್ರ ಗಂಡ" ಎಂಬ ಪಟ್ಟ ಹೊತ್ತ ತನ್ನ ಅಪ್ಪ ದಶರಥ ತಾನು ಆಗಬಾರದು ಎಂಬ ಕಾರಣಕ್ಕೂ ರಾಮ ಸೀತೆಯ ವಿಷಯದಲ್ಲಿ ಅತಿ ಕ್ರೂರಿ ಆಗಿಬಿಟ್ಟನೆ ಎಂಬ ಪ್ರಶ್ನೆಯೂ ಏಳುತ್ತದೆ.

ಒಟ್ಟಿನಲ್ಲಿ ಅನೇಕಾನೇಕ ಗೊಂದಲಗಳನ್ನು ಎದುರಿಸುತ್ತಾ, ತನ್ನನ್ನು ಇನ್ನಷ್ಟು ಮತ್ತಷ್ಟು ದುರಂತದವರೆಗೆ ಕರೆದೊಯ್ಯುವ ಆಯ್ಕೆಗಳನ್ನು ಮಾಡುತ್ತಾ ಹೋಗುತ್ತಾನೆ ರಾಮ. ಈ ಅರ್ಥದಲ್ಲಿ ಕೊನೆಗೂ ಪುರುಷೋತ್ತಮ ರಾಮ ಎಲ್ಲವನ್ನೂ ಕಳೆದುಕೊಂಡು ಒಂಟಿಯಾಗಿ ನಿಲ್ಲುವ ವ್ಯಕ್ತಿಯೇ. ಸೀತೆ ರಾಮನನ್ನು ಬಿಟ್ಟು ಬಿರಿದ ಭೂಮಿಯೊಳಗೆ ಕಣ್ಮರೆಯಾಗುವುದು ಇಬ್ಬರ ನಡುವಿನ ಪ್ರೀತಿ ಸಂಪೂರ್ಣ ಸತ್ತುಹೋದ ಸಂಕೇತ. ದೂರವಿದ್ದ ಹೆಂಡತಿಯನ್ನು ಉತ್ಕಟ ಪ್ರೀತಿಸಿದ ರಾಮನಿಗೆ ಜೊತೆಗೂಡಿದ ಹೆಂಡತಿಯನ್ನು ಪ್ರೀತಿಸುವ ಗೌರವಿಸುವ ಶಕ್ತಿ ಉಡುಗಿ ಹೋಗಿದ್ದು ಎಂಥ ವಿಪರ್ಯಾಸ! ಯುದ್ಧ ಮಾಡಿ, ಲಂಕೇಶನನ್ನು ಸಂಹರಿಸಿ, ಮತ್ತೆ ರಾಜನ ಪಟ್ಟ ಏರಿದ ಪುರುಷೋತ್ತಮ ತನ್ನ ವೈಯ್ಯಕ್ತಿಕ ಮಿಡಿತಗಳನ್ನು ಸಂಪೂರ್ಣ ಕಳೆದುಕೊಂಡುಬಿಟ್ಟನೆ?

ತಾನು ಸೃಷ್ಟಿಸಿದ ಕಥೆಯ ನಾಯಕನ ಬಗ್ಗೆ ವಾಲ್ಮೀಕಿಯ ನಿಲುವೇನು? "ವಾಲ್ಮೀಕಿ ಬರೆದದ್ದು ತಪ್ಪೇ ಮಾಡದ ದೈವಮಾನವನ ಕತೆಯನ್ನಾ? ಅದು ಹೇಗಾದೀತು? ಕೊನೆಗೆ ಎಲ್ಲವನ್ನೂ ಕಳೆದುಕೊಂಡು ನಿಂತವನು ರಾಮನೇ ಅಲ್ಲವೇ?" ಅನ್ನುವ ಪ್ರಶ್ನೆ ಎತ್ತುತ್ತಾರೆ ಆರ್ಶಿಯಾ. ವಾಲ್ಮೀಕಿ ರಾಮಾಯಣ ಸೀತೆ ರಾಮನನ್ನು ಬಿಟ್ಟು ಭೂದೇವಿಯ ಗರ್ಭ ಸೇರುವುದರೊಂದಿಗೆ ಸಮಾಪ್ತವಾಗುತ್ತದೆ. (ಉತ್ತರ ರಾಮಾಯಣ ಪ್ರಕ್ಷೇಪ ಅನ್ನುವುದು ಅನೇಕ ವಿದ್ವಾಂಸರು ಒಪ್ಪಿರುವ ಮಾತು.) ಅಂದರೆ ಸೀತೆಯೇ ಇಲ್ಲವಾದ ಮೇಲೆ ಇನ್ನು ಹೇಳುವುದಕ್ಕೆ ಕತೆ ಏನಿದೆ ಅನ್ನುವುದು ವಾಲ್ಮೀಕಿಯ ನಿಲುವಾಗಿರಬಹುದೆ? "ಅಂದರೆ ಕೊನೆಗೂ ವಾಲ್ಮೀಕಿಯ ಸಹಾನುಭೂತಿ ಇದ್ದದ್ದು ಯಾರ ಕಡೆಗೆ ಅನ್ನುವುದು ಇಲ್ಲಿ ಸ್ಪಷ್ಟ ಅಲ್ಲವೇ? ನಾನಂತೂ ಹಾಗೆಯೇ ನಂಬಿದ್ದೇನೆ." ಅನ್ನುವ ಮಾತುಗಳೊಂದಿಗೆ ಪುಸ್ತಕ ಕೊನೆಯಾಗುತ್ತದೆ.




ಆರ್ಶಿಯಾ ಸತ್ತಾರ್ ತಮ್ಮ ಪುಸ್ತಕ ಮತ್ತು ಅದು ಎತ್ತುವ ವಿಷಯಗಳ ಬಗ್ಗೆ ಹೇಳುವ ಮಾತುಗಳ ಆಯ್ದ ಭಾಗಗಳು ಇಲ್ಲಿವೆ:

ಪ್ರ: ಕಟ್ಟಾ ಸ್ತ್ರೀವಾದಿಯಾದ ನೀವು ರಾಮನನ್ನು ಸೈಕೋ ಅನಲೈಸ್ ಮಾಡಲು ಹೊರಟದ್ದು ಯಾಕೆ?

ಉ: ಒಂದೋ ಸಂಪೂರ್ಣ ದೈವೀಕರಿಸಿ ಅಥವ ಅವನಲ್ಲಿ ಬರೀ ಅವಗುಣಗಳನ್ನೇ ಕಾಣುತ್ತಾ ಹೋಗಿರುವ ನಾವು, ರಾಮನ ವ್ಯಕ್ತಿತ್ವಕ್ಕೆ ಇರಬಹುದಾದ ವಿವಿಧ ಸಾಧ್ಯತೆ, ಪಾರದರ್ಶಕತೆಯನ್ನು ಇಲ್ಲವಾಗಿಸಿದ್ದೇವೆ ಅನ್ನಿಸುತ್ತದೆ. ಒಬ್ಬ ಸ್ತ್ರೀವಾದಿಯಾಗಿಯೇ ನನಗೆ ರಾಮನ ವ್ಯಕ್ತಿತ್ವವನ್ನು ಅದರ ಎಲ್ಲಾ ಸಂಕೀರ್ಣತೆಯೊಂದಿಗೆ ಪರಿಶೀಲಿಸಬೇಕು ಅನ್ನಿಸಿದ್ದು. ಅವನ ಆಚಾರ ವಿಚಾರಗಳನ್ನು ಸಮರ್ಥಿಸುವ ದೃಷ್ಟಿಯಿಂದಲ್ಲ, ಅವು ರೂಪುಗೊಂಡದ್ದು ಹೇಗೆ ಎಂದು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ. ನಮಗೆ ಕಿರಿಕಿರಿ ಉಂಟು ಮಾಡುವ ವಿಷಯಗಳನ್ನೂ ನಾವು ಮರುಪರಿಶೀಲನೆ ಮಾಡುತ್ತಲೇ ಇರಬೇಕು. ನಮ್ಮ ಕಿರಿಕಿರಿಯ ಮೂಲವನ್ನು ಶೋಧಿಸುವುದು ನಮ್ಮನ್ನು ನಾವು ಅರ್ಥ ಮಾಡಿಕೊಳ್ಳುವ ಕ್ರಮವೂ ಹೌದು.

ಪ್ರ: ಎಷ್ಟೇ ಅರ್ಥ ಮಾಡಿಕೊಂಡರೂ ರಾಮ ವಿಶೇಷವಾಗಿ ದಲಿತರಿಗೆ, ಮಹಿಳೆಯರಿಗೆ ಕಿರಿಕಿರಿ ಮಾಡುವ ವ್ಯಕ್ತಿತ್ವವೇ ಅಲ್ಲವೇ?

ಉ: ಖಂಡಿತ. ನನಗೂ ಇದು ಸುಲಭದ ಕೆಲಸವಲ್ಲ. ಆದರೆ ಒಂದು ಮಾತನ್ನು ನಾವು ಸ್ಪಷ್ಟ ಅರಿಯಬೇಕು. ಅರ್ಥ ಮಾಡಿಕೊಳ್ಳುವು ದೆಂದರೆ ಅವನನ್ನು ಒಪ್ಪುವುದು ಅಂತಲ್ಲ. ಅದರರ್ಥ ನಾವು ನಮ್ಮ ವಿಚಾರಗಳ ನೆಲೆಗಳನ್ನು ಸಂಪೂರ್ಣ ಶೋಧಿಸಿದ್ದೇವೆ, ಬರೀ ಪ್ರಚಲಿತ ಅಭಿಪ್ರಾಯಗಳನ್ನು ಸುಲಭಕ್ಕೆ ನಮ್ಮದಾಗಿಸಿ ಕೊಂಡುಬಿಟ್ಟಿಲ್ಲ ಅಂತಷ್ಟೇ.

ಪ್ರ: ನಿಮ್ಮ ಅಭಿಪ್ರಾಯದಲ್ಲಿ ರಾಮನ ಅತಿ ದೊಡ್ಡ ವ್ಯಕ್ತಿತ್ವ ಲೋಪ ಯಾವುದು?

ಉ: ಅವನ "ಸಾರ್ವಜನಿಕ" ನೆಲೆ ಅವನ "ವೈಯ್ಯಕ್ತಿಕ" ನೆಲೆಯನ್ನು ಸಂಪೂರ್ಣ ನುಂಗಿಹಾಕಿಬಿಡುವುದು ಅನ್ನಿಸುತ್ತದೆ. ಶ್ರೇಷ್ಠ ರಾಜನಾಗುತ್ತಾ ಅವನು ವ್ಯಕ್ತಿಯಾಗಿ ಸಣ್ಣವನಾಗುತ್ತಾನೆ. ನನ್ನ ದೃಷ್ಟಿಯಲ್ಲಿ ಕೊನೆಗೆ ಅವನು ಸಂಪೂರ್ಣ ಒಬ್ಬಂಟಿ ಯಾಗುವುದಕ್ಕೂ ಇದೇ ಕಾರಣ. ಆದರೆ ಇದೇ ಕಾರಣಕ್ಕೆ ಹಲವರಿಗೆ ರಾಮ ದೇವರಾಗಿ ಕಾಣುತ್ತಾನೆ ಅನ್ನುವುದನ್ನೂ ನಾವು ಗಮನಿಸಬೇಕು. ರಾಮನ ವ್ಯಕ್ತಿತ್ವವನ್ನು ಹಲವು ಬಗೆಗಳಲ್ಲಿ ಓದಬಹುದು. ಅದರಲ್ಲಿ ನನ್ನದೂ ಒಂದು.

ಪ್ರ: ರಾಮನ ವ್ಯಕ್ತಿತ್ವ ವಾಲ್ಮೀಕಿ ರಾಮಾಯಣದಲ್ಲಿ ಪ್ರಕ್ಷೇಪ ಎಂದು ಅನೇಕರು ಭಾವಿಸುವ ಮೊದಲ ಮತ್ತು ಕೊನೆಯ ಕಾಂಡದಲ್ಲಿ ಹೇಗೆ ಭಿನ್ನವಾಗಿದೆ?

ಉ: ರಾಮನನ್ನು ಖಡಾಖಂಡಿತವಾಗಿ ದೇವರು ಎಂದು ಚಿತ್ರಿಸುವುದು ಈ ಎರಡು ಕಾಂಡಗಳಲ್ಲಿ. ಮಧ್ಯದ ಕಾಂಡಗಳಲ್ಲಿ ರಾಮನ ವ್ಯಕ್ತಿತ್ವಕ್ಕೆ ಒಂದಷ್ಟು ಮನುಷ್ಯ ಸಹಜ ಓರೆಕೋರೆಗಳಿದ್ದು, ಅಲ್ಲಿ ನಮಗೆ ಅವನ ಜೊತೆ ಸಂಭಾಷಣೆಗೆ ಅವಕಾಶವಿದೆ. ಮೊದಲ ಹಾಗು ಕೊನೆಯ ಕಾಂಡಗಳು ಇದನ್ನೆಲ್ಲಾ ಇಸ್ತ್ರಿಮಾಡಿ ನೇರ ಮತ್ತು ಸರಳ ಮಾಡಿಬಿಡುತ್ತವೆ.

ಪ್ರ: ರಾಮನ ಸುತ್ತಲಿನ ವಾದವಿವಾದಗಳು ಮುಗಿಯುವ ಲಕ್ಷಣಗಳೇ ಇಲ್ಲ. ಇತ್ತೀಚೆಗೆ ಎ.ಕೆ. ರಾಮಾನುಜಂ ಅವರ ರಾಮಾಯಣದ ಬಗೆಗಿನ ಲೇಖನವನ್ನು ದೆಹಲಿ ವಿಶ್ವವಿದ್ಯಾಲಯದ ಪಠ್ಯಕ್ರಮದಿಂದ ತೆಗೆದು ಹಾಕಿದ್ದರ ಬಗ್ಗೆ ವಿವಾದ ಎದ್ದಿತ್ತು. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು?

ಉ: ವಿದ್ಯಾರ್ಥಿಗಳನ್ನು ಹೆಚ್ಚು ಹೆಚ್ಚು ಚಿಂತನೆಗೆ ಒಡ್ಡಬೇಕಾದ ವಿಶ್ವವಿದ್ಯಾಲಯವೊಂದು ಹೀಗೆ ಕಣ್ಣುಪಟ್ಟಿ ತೊಡುವುದು, ತೊಡಿಸುವುದು ವಿಷಾದಕರ. ಈ ರೀತಿಯ ಪ್ರಯತ್ನಗಳಿಗೆ ಉತ್ತರವಾಗಿ ನಾವು ಓದುಗರು ಈ ರೀತಿಯ ಪಠ್ಯಗಳನ್ನು ಇನ್ನೂ ಹೆಚ್ಚೆಚ್ಚು ಓದಿ ಪ್ರತಿಕ್ರಿಯಿಸಿ ಚರ್ಚಿಸಬೇಕು.

*(ಆರ್ಶಿಯಾ ಸತ್ತಾರ್ ಸಂದರ್ಶನದ ಕೆಲ ಭಾಗಗಳು "ದಿ ಹಿಂದೂ" ಪತ್ರಿಕೆಯಲ್ಲಿ ಪ್ರಕಟವಾಗಿತ್ತು.)*

# ಊರ್ಮಿಳೆಯ ದುರಂತ

ಜನ ಹೋಲಿಸುತ್ತಾರೆ ಸೋದರಿಕೆಗೆ ವಿಧೇಯತೆಗೆ
ರಾಮಲಕ್ಷ್ಮಣರನ್ನು ರಾಮನನ್ನನುಸರಿಸಿ ಕಾಡಿಗೆ
ಬಂದ ಲಕ್ಷಣನೊಬ್ಬ ಆದರ್ಶ ಪುರುಷ
ಏಕೆಂದರೆ ಅವನು ಧಾವಿಸಿದ್ದ ರಾಮನ
ರಕ್ಷಣೆಗೆಂದು
ಅತ್ತಿಗೆಯ ಸೇವೆಗೆಂದು
ನಿರ್ಭಾವದಿಂ ತೊರೆದು ಬಂದಿದ್ದ
ಪ್ರಜ್ಞೆ ತಪ್ಪಿದ್ದ ತಂದೆ ದಶರಥನ
ಪುತ್ರಶೋಕದಡಿಯಲ್ಲಿ ಮುದಿಯಾಗುವ
ಮುದುಕಿಯರನ್ನು
ಇರಬೇಕಿತ್ತು ಅವನಿಗೆ ತನ್ನಣ್ಣನ ಶೌರ್ಯದ ಬಗೆಗೆ
ಆತ್ಮವಿಶ್ವಾಸ
ತೊಲಗಬೇಕಿತ್ತು ತನ್ನಣ್ಣನನ್ನು ಮೂರ್ತಿಯಾಗಿಸಿ

ಕೀರ್ತಿವಂತನಾಗುವ ಚಪಲ
ಅಣ್ಣನ ಆಜ್ಞೆಯ ಶಿರದ ಮೇಲೆ ಹೊತ್ತ ಇವನು
ರಚಿಸಿದ್ದ ಸೀತೆಗೆ ಲಕ್ಷ್ಮಣರೇಖೆಯ
ತನ್ನಣ್ಣ ಬರುವವರೆಗೆ
ಆದರೆ ತನ್ನೆಲ್ಲವನ್ನು ಬಿಟ್ಟು
ನೀನೆಲ್ಲವೆಂದು ಬಂದ ಸಾಧ್ವಿ
ಊರ್ಮಿಳೆಗೆ ಹದಿನಾಲ್ಕು ವರ್ಷಗಳ
ಕಾರಾಗೃಹದ ಲಕ್ಷ್ಮಣರೇಖೆ
ಲಕ್ಷ್ಮಣರೇಖೆಯ ದಾಟಿದ ಸೀತೆ
ಆಗಿದ್ದಳು ಕೀರ್ತಿಮಾತೆ
ಲಕ್ಷ್ಮಣರೇಖೆಯ ದಾಟಿದ ಊರ್ಮಿಳೆ
ಕೂತಲ್ಲೆ ಕೂದಲಾಗಿ ಕೂದಲೆಲ್ಲ ಬೆಳಗಾಗಿ
ಬೆರೆಯದೆಯೆ ಬಾಳಲ್ಲಿ ಬೆಂದ ಕಾಳಾಗಿ
ಕಂಡೂ ಕಾಣಿಸದೆ ಕಣ್ಣಿಗೆ
ಶೂನ್ಯವಾಗಿದ್ದು ಊರ್ಮಿಳೆಯ ದುರಂತ.

■ **ತಿ.ನ. ಲಕ್ಷ್ಮೀಮಲ್ಲಯ್ಯ**





# ನಮ್ಮ ಮಾನಸ ಪತ್ರಿಕೆ

ಪ್ರಿಯ ಮಾನಸ,

'ನಮ್ಮ ಮಾನಸ'ದ ಪ್ರಕಟಣೆಯ ನಿಲುಗಡೆಯ ವಿಷಯ ನನಗೆ ಆಘಾತವನ್ನುಂಟುಮಾಡಿದೆ. ನಾನು ಊರಲ್ಲಿಲ್ಲವಾದ ಕಾರಣ ಜನವರಿ, ಫೆಬ್ರವರಿಯ ಸಂಚಿಕೆಗಳನ್ನು ಇಂದೇ ಗಮನಿಸಿದೆ. ಇಂದು ನಿಜವಾಗಿಯೂ ಬೇಸರದ ದಿನ! ಸ್ವಾಯತ್ತ ಚಳವಳಿಗಳ ಸಿದ್ಧಾಂತಗಳಿಗೆ ಬದ್ಧವಾದ ಕನ್ನಡದ ಒಂದೇ ಒಂದು ಪತ್ರಿಕೆ ನಿಲುಗಡೆಯಾಗಿದೆ. ವಾಸ್ತವದಲ್ಲಿ ನಿಲ್ಲಿಸಲಾಗಿದೆ. ಈ ಶೂನ್ಯ ಉಳಿದಿರುತ್ತದೆ. ಸ್ವಾಯತ್ತ ಮಹಿಳಾ ಚಳವಳಿಗಳು/ಸಂಸ್ಥೆಗಳು ಬದ್ಧತೆಯುಳ್ಳ ಗುಂಪುಗಳೊಂದಿಗೆ ಹೋರಾಟದ ಹಾದಿಯಲ್ಲಿ ಸಾಗುವ ದಿಸೆಯಲ್ಲಿ ಅತ್ಯಂತ ಕಷ್ಟದ ದಿನಗಳನ್ನು ಬಹುಕಾಲದಿಂದಲೂ ಎದುರಿಸುತ್ತಾ ಬಂದಿವೆ. ಅದಕ್ಕೆ ಕಾರಣಗಳು ಹಲವು. 'ಸಮತಾ' ವೇದಿಕೆಯ ನಾವು ಹೋರಾಟವನ್ನು ಮುಂದುವರೆಸಲು ಹೆಣಗಾಡುತ್ತಿದ್ದೇವೆ. ಅದನ್ನು ವಿಸರ್ಜಿಸಿಬಿಡುವ ಯೋಚನೆಯನ್ನೂ ಈ ಹಿಂದೆಯೇ ಮಾಡಿದ್ದೆವು. ಆದರೂ ಹಠದಿಂದ ಮುಂದುವರಿದಿದ್ದೇವೆ! ನಿಮಗೇ ತಿಳಿದಿರುವಂತೆ, ಇಲ್ಲಿ ಬದ್ಧತೆಯನ್ನುಳ್ಳ ಗುಂಪುಗಳ/ಪಡೆಗಳ ಕೊರತೆ ಇದೆ-ಕೇಸುಗಳನ್ನು ನಿಭಾಯಿಸುವ/ನಿರ್ವಹಿಸುವ, ಅದಕ್ಕಾಗಿ ಓಡಾಡುವ – ಅದು ಪೊಲೀಸ್ ಠಾಣೆಯಾಗಿರಬಹುದು ಅಥವಾ ಜಿಲ್ಲಾಧಿಕಾರಿಯ ಕಛೇರಿಯಾಗಿರಬಹುದು ಅಥವಾ ಪೊಲೀಸ್ ಕಮಿಷನರ್/ಸೂಪರಿಂಟೆಂಡೆಂಟ್/ಐಜಿಪಿ ಕಛೇರಿಯಾಗಿರಬಹುದು. ಒಂದುವೇಳೆ, ಒಂದು ಪ್ರತಿಭಟನಾ ಮೆರವಣಿಗೆಯನ್ನು ಆಯೋಜಿಸಿದೆವೆಂದರೆ, ನಮ್ಮನ್ನು ನಾವೇ ಬೀದಿಯಲ್ಲಿ ನೋಡಿಕೊಂಡು ನಿರಾಶರಾಗುತ್ತೇವೆ; ಯುವಜನರು ನಮ್ಮೊಂದಿಗೆ ಕೈಜೋಡಿಸುವುದಿಲ್ಲ. ಬಹುಶಃ ನಾವು ಯುವಜನಾಂಗದೊಂದಿಗಿನ ಸಂಪರ್ಕವನ್ನು ಕಡಿದುಕೊಂಡಿದ್ದೇವೆ.

1978–80 ನಾವು ವಿದ್ಯಾರ್ಥಿ/ಯುವ ಪೀಳಿಗೆಯವರಾಗಿ ಸ್ವಾಯತ್ತ ಮಹಿಳಾ ಚಳವಳಿಗೆ ಕಾಲಿಟ್ಟಿದ್ದೆವೆನ್ನುವುದು ಸತ್ಯಸಂಗತಿ. ಆದರೀಗ ಸ್ವಾಯತ್ತ ಮಹಿಳಾ ಗುಂಪುಗಳ ಸಮಾವೇಶಗಳು ಅಪರೂಪವಾಗುತ್ತಿವೆ. 2006ರಲ್ಲಿ ಕೊಲ್ಕತ್ತಾದಲ್ಲಿ ನಾವು ಸೇರಿದ್ದ ಸಮಾವೇಶವೇ ಕೊನೆಯದಾಗಿತ್ತು. ಅದರೂ ಒಂಬತ್ತು ವರ್ಷಗಳ ನಂತರದಲ್ಲಿ (1997 ರಲ್ಲಿ ರಾಂಚಿಯಲ್ಲಿ ನಡೆದಿತ್ತು). ಇಂದಿನವರೆಗಿನ ನಮ್ಮ ಉಳಿವು ಒಂದು ಪವಾಡವೇ ಸರಿ! ಏಕೆಂದರೆ, ಸ್ವಾಯತ್ತ ಮಹಿಳಾ ಚಳವಳಿಗಳ ಪಡೆಗಳು ಕಣ್ಮರೆಯಾಗುತ್ತಿವೆಯೆನ್ನುವುದು ನಮ್ಮ ಸುತ್ತ ಕಣ್ಣಾಡಿಸಿದಾಗ ತಿಳಿದುಬರುತ್ತದೆ. ಹೊಸದಾಗಿ ಹುಟ್ಟಿಕೊಂಡಂತವುಗಳಿಗೆ ಯಾವುದೇ ರೀತಿಯ ಅನುಭವ ಅಂದರೆ ಕ್ರಿಯಾತ್ಮಕತೆ (activism) ಅಥವಾ ಸಿದ್ಧಾಂತಗಳ ಪರಿಚಯ ಇಲ್ಲದುದರಿಂದಾಗಿ ದೃಢನಂಬಿಕೆಯ ಕೊರತೆ ಕಾಡುತ್ತಿದೆ. ಅಂದಿನ ಮುನ್ನುಗ್ಗುವ, ದಿಟ್ಟ, ವ್ಯಕ್ತಿಗತವಾದ ಹಾಗೂ ಸಾಹಸಮಯವಾದ ಚಳವಳಿಯ ಹಂತ ಕಳೆದುಹೋಗಿದೆಯೆಂದು ಭಾಸವಾಗುತ್ತಿದೆ.

1980ರ ದಶಕದಲ್ಲಿ ಆರಂಭಗೊಂಡ ನವ ಉದಾರವಾದೀ (neoliberal) ಹಂತವು ಮಹಿಳೆಯರು, ಅಭಿವೃದ್ಧಿ, ಆದಿವಾಸಿಗಳು, ಕೊಳೆಗೇರಿಗಳು ಮುಂತಾದ ಪ್ರಶ್ನೆಗಳಿಗೆ ಒಳದಾರಿಗಳನ್ನು ಕಂಡುಕೊಳ್ಳುವಲ್ಲಿ ಯಶಸ್ಸನ್ನು ಕಂಡಿದೆ. ಅವುಗಳನ್ನು ಸರಕಾರೇತರ ಸಂಸ್ಥೆಗಳು (NGOs) ಹಾಗೂ ಸ್ವಸಹಾಯ ಗುಂಪುಗಳನ್ನು (SHGs) ಎಲ್ಲೆಡೆ ಆರಂಭಿಸುವ ಮೂಲಕ ತುಂಡುತುಂಡಾಗಿಸಲು ಸಾಧ್ಯವಾಗಿದೆ. ಈ ಸಂಸ್ಥೆಗಳು/ಗುಂಪುಗಳು ವ್ಯವಸ್ಥೆಯನ್ನು ಪ್ರಶ್ನಿಸುವ ಪ್ರಜ್ಞಾವಂತ ಪಡೆಯೊಂದಿಗೆ ಚಿಂತನ-ಮಂಥನ ನಡೆಸುವ ಹಾಗೂ ಮಹಿಳೆಯರ ಅಥವಾ ಮಾನವಹಕ್ಕುಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಎತ್ತುವ ಬದಲಿಗೆ ಓಟಿನ ಬ್ಯಾಂಕುಗಳಾಗಿರುವುದು ರಾಜಕೀಯವಾಗಿ ಸಾಬೀತಾಗಿದೆ. ಸ್ವಾಯತ್ತ ಮಹಿಳಾ ಹೋರಾಟದ ಫಲಶ್ರುತಿಗಳಾದ ಮಹಿಳಾ ಪೊಲೀಸ್ ಠಾಣೆಗಳು, ಆಯೋಗಗಳು, ಕುಟುಂಬ ನ್ಯಾಯಾಲಯಗಳು, ಸಮಾಲೋಚನಾ ಕೇಂದ್ರಗಳು, ತಾತ್ಕಾಲಿಕ ಆಶ್ರಯಧಾಮಗಳು (Short Stayhomes) ಮುಂತಾದವು ಸ್ವಾಯತ್ತ ಮಹಿಳಾ ಚಳವಳಿಯ ಮೂಲ ಆಶಯವನ್ನೇ ಅರ್ಥಮಾಡಿಕೊಳ್ಳಲಾಗದ ಅಧಿಕಾರಿಗಳ ಮುಂದಾಳತ್ವದಲ್ಲಿ ಮುಂದುವರಿಯುತ್ತಿದೆ. ಪರಿಣಾಮವಾಗಿ, ಅವು ಲಿಂಗತ್ವಕ್ಕೆ ಜಡವಾಗುವ ಮೂಲಕ ಸ್ವಾಯತ್ತ ಮಹಿಳಾ ಚಳವಳಿಯ ಹೆಗ್ಗುರಿಗಳನ್ನು ತಲುಪದಂತೆ ನೋಡಿಕೊಳ್ಳುವಲ್ಲಿ ನೆರವಾಗಿವೆ.

ವರದಕ್ಷಿಣೆ ನಿಷೇಧ, ಮಾಧ್ಯಮಗಳಲ್ಲಿ ಮಹಿಳೆಯ ಅಶ್ಲೀಲ/ಅಸಭ್ಯ ಪ್ರದರ್ಶನ, ಆಸ್ತಿ ಹಂಚಿಕೆ, ಗಂಡನ ಮನೆಯಲ್ಲಿ ಬದುಕುವ ಹಕ್ಕು, ಅತ್ಯಾಚಾರ ಕಾನೂನು, PNDT, PWDV ಕಾಯಿದೆಗಳು ಅಥವಾ ವೇಶ್ಯಾವೃತ್ತಿಗೆ ಸಂಬಂಧಿಸಿದಂತೆ ನಾವು ಒತ್ತಾಯಪೂರ್ವಕವಾಗಿ ಪಡೆದುಕೊಂಡ ಕಾಯಿದೆಗಳ ರಾಶಿಗಳು ಜಾರಿಯಾಗದೆ ಉಳಿದಿವೆ ಅಥವಾ ಕಡಿಮೆ ಪ್ರಕರಣಗಳಲ್ಲಿ ಜಾರಿಯಾಗಿವೆ. ಈ ಸರಕಾರೇತರ ಸಾಂಸ್ಥೀಕರಣ (NGOisation) ಸ್ವಾಯತ್ತ ಮಹಿಳಾ ಚಳವಳಿಯನ್ನು ಪ್ರತ್ಯೇಕಗೊಳಿಸಿದೆ. ನಾವು ಪರಸ್ಪರರ ನಡುವಿನ ಕೊಂಡಿಯನ್ನು ಕಡಿದುಕೊಂಡಿದ್ದೇವೆ. ಮಹಿಳಾ ಚಳವಳಿಯ ನಿಶ್ಶಕ್ತೀಕರಣ (de-empowerment) ಈಗ ಪೂರ್ಣಗೊಂಡಿದೆಯೆಂದು ಕಾಣುತ್ತಿದೆ. ಅಂದಿನ ಚಳವಳಿಯ ಗುರಿ/ಆಶಯಗಳನ್ನು ಹೊಂದಿದ್ದ ಸಂಘಟನೆಯನ್ನು ನಾವೀಗ ಮುಚ್ಚುತ್ತಿದ್ದೇವೆ!

ಈ ನವ ಉದಾರವಾದೀ ಆಕ್ರಮಗಳು ಪುರುಷಪ್ರಧಾನಿಕ ಆಕ್ರಮಣದೊಂದಿಗೆ ಕೈ ಜೋಡಿಸುತ್ತಿರುವ ಪರಿಣಾಮವಾಗಿ ಕಳೆದುಹೋಗುತ್ತಿರುವ ಹೆಣ್ಣು ಭ್ರೂಣಗಳು, ಗ್ರಾಮೀಣ ಪ್ರದೇಶಗಳಿಂದ ಹೆಣ್ಣುಮಕ್ಕಳ ಕಣ್ಮರೆ ಹಾಗೂ ವರದಕ್ಷಿಣೆ ಕೊಲೆ ಪ್ರಕರಣಗಳು

ಹೆಚ್ಚುತ್ತಿವೆ. ಜಾತಿ ಗುಂಪುಗಳೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವಂತೆ ಮಹಿಳೆಯರನ್ನು ಒತ್ತಾಯಿಸುವ ಮೂಕಲಕ ಬಲಪಂಥೀಯ ಶಕ್ತಿಗಳು ಅವರನ್ನು ಮತ್ತೆ ಕತ್ತಲೆಯ ಕೂಪಕ್ಕೆ ತಳ್ಳುವ ಹುನ್ನಾರ ನಡೆಸಿವೆ.

ಈ ಕತ್ತಲೆಯಲ್ಲೂ ನಮಗೆ ಭರವಸೆಯ ಬೆಳ್ಳಿ ಬೆಳಕೊಂದು ಗೋಚರಿಸುತ್ತಿದೆ. ಸುತ್ತಲೂ ಕಣ್ಣಾಡಿಸಿದಾಗ ಎಡಪಕ್ಷಗಳು ತಮ್ಮ ಮಹಿಳಾ ಶಾಖೆಗಳು/ಸಂಘಟನೆಗಳ ಕುರಿತಾಗಿ ಮರುಚಿಂತನೆ ನಡೆಸಿರುವುದು ಕಾಣುತ್ತಿದೆ. ಅವು ಗುಂಪುಗಳನ್ನು ಆರಂಭಿಸುವ, ಸಂಘಟಿಸುವ ಹಾಗೂ ಕ್ರಿಯಾಶೀಲರಾಗುವ ಸ್ವಾತಂತ್ರ್ಯವನ್ನು ಮಹಿಳಾ ಶಾಖೆಗಳಿಗೆ ನೀಡಲು ಪ್ರಯತ್ನಿಸುತ್ತಿವೆ. ಅಖಿಲ ಭಾರತ ಮಹಿಳಾ ಸಾಂಸ್ಕೃತಿಕ ಸಂಘಟನೆ (AIMSS), ಆಲ್ ಇಂಡಿಯಾ ಪ್ರೋಗ್ರೆಸಿವ್ ವಿಮೆನ್ಸ್ ಫ್ರಂಟ್ (AIPWA), (AIDWA), ಕರ್ನಾಟಕದ 'ಸಮಾನತಾ ಮಹಿಳಾ ವೇದಿಕೆಗಳಲ್ಲಿ ಅಂಥ ಕ್ರಿಯಾತ್ಮಕತೆಯನ್ನು ನಾನು ಪ್ರತ್ಯೇಕಿಸಿಕೊಳ್ಳುವುದಕ್ಕಿಂತ ಜನರೊಂದಿಗಿರುವುದು ಒಳ್ಳೆಯದು. ಹೋರಾಡುತ್ತಿರುವ ಮಹಿಳೆಯರ ಕೈಗಳನ್ನು ಬಲಪಡಿಸುವುದಕ್ಕಾಗಿ ಒಗ್ಗಟ್ಟಾಗುವುದು ಇಂದಿನ ಅಗತ್ಯವಾಗಿದೆ.

ವಿಮರ್ಶಾತ್ಮಕವಾಗಿ ಮತ್ತು ಸಂಘಟಿತವಾಗಿ ಸ್ವಾಯತ್ತ ಮಹಿಳಾ ಚಳವಳಿಯ ಹೋರಾಟದ ಹರಿತತೆಯನ್ನು ಪಡೆದುಕೊಳ್ಳುತ್ತಾ, ನಮ್ಮ ಕಹಿ ಅನುಭವಗಳಿಂದ ಪಾಠ ಕಲಿಯುತ್ತಾ (ಸಂಪೂರ್ಣವಾದ ಸ್ವವಿಮರ್ಶೆಯ ನಂತರ) ಶಕ್ತಿಯುತವಾದ ಸಾಮುದಾಯಿಕ ಏಕತೆಗಾಗಿ ಕಾರ್ಯರೂಪದ ಹೆಜ್ಜೆಗಳೊಂದಿಗೆ ನಮ್ಮ ಕನಸನ್ನು ಮತ್ತೆ ಕಟ್ಟಿಕೊಳ್ಳುವ ನಿರೀಕ್ಷೆ ಇಟ್ಟುಕೊಳ್ಳೋಣವೆಂದರೆ ಸಮಯ ನಮ್ಮ ಕೈಜಾರಿಹೋಗಿದೆ!

ನನ್ನನ್ನು ಕೇಳುವುದಾದರೆ, 'ನಮ್ಮ ಮಾನಸ'ವನ್ನು ನಿಲ್ಲಿಸಬೇಡಿ. ಇಂದಿನ ಪರಿಸ್ಥಿತಿಯಲ್ಲಿ ಅದೊಂದು ನಿಯತಕಾಲಿಕೆಯಾಗಿ ಚೆನ್ನಾಗಿ ಬರುತ್ತಿದೆ. ಉಸಿರಾಡಲು ಸ್ವಲ್ಪ ಸಮಯ ದೊರಕುವಂತೆ ತ್ರೈಮಾಸಿಕ ಅಥವಾ ಚಾತುರ್ಮಾಸಿಕವಾಗಿ ಹೊರತರಬಹುದು. (ನಾನು 'ಮಾನಸ'ಕ್ಕೆ ಧನಸಹಾಯವನ್ನು ಸಂತೋಷವಾಗಿ ನೀಡಬಲ್ಲೆ. ನನಗೆ ಗೊತ್ತು, ಅದು ಕೇವಲ ಧನಸಹಾಯದಿಂದ ಸಾಧ್ಯವಿಲ್ಲ! ಅದಕ್ಕಿಂತ ಹೆಚ್ಚಿನದರ ಅಗತ್ಯವಿದೆಯೆಂದು!) ನೀವು ತುಂಬಾ ಆಯಾಸಗೊಂಡಿರಬಹುದು. ಆದರೆ ಕರ್ನಾಟಕದ ಮಹಿಳೆಯರಿಗೆ ಓದುವ ಸ್ವಾಯತ್ತ ಮಹಿಳಾ ಚಳವಳಿಯ ಅಂತರಂಗವನ್ನು ಅರಿಯುವ ಅಗತ್ಯವಿದೆ! ಆದರೂ...! ದಯವಿಟ್ಟು ಸೋಲನ್ನೊಪ್ಪಿಕೊಳ್ಳಬೇಡಿ. ಮುಂದೆ ಸಾಗಿರಿ! ನವ ಉದಾರವಾದೀ ಮತ್ತು ಪುರುಷಪ್ರಧಾನಿಕ ಶಕ್ತಿಗಳನ್ನು ಸೋಲಿಸುವ ಅಗತ್ಯವಿದೆ. ಮರುಚಿಂತನೆ ಮಾಡಿ... ಮುಂದೆ ಸಾಗಿ!

ನಿಮ್ಮೊಂದಿಗೆ

**ರತಿ**

ಕನ್ನಡಕ್ಕೆ: ಎಂ. ವನಜ


**Form IV (See Rule 8)**

Statement about ownership and other particular about News Paper

**"Namma Manasa"**

As required to be published under section 19 of the press and Registration Book act read with the Rule 10 of the Press and Registration of News Papers(Central) 1956.

| | | | |
|---|---|---|---|
| 1) | Name of the Publication | : | Namma Manasa |
| 2) | Place of the Publication | : | Bangalore, Karnataka |
| 3) | Periodicity of Publication | : | Monthly |
| 4) | Language | : | Kannada |
| 5) | Name of the Editor | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 6) | Name of the Publisher & owner | : | H.S. Rajeshwari |
| | Address | : | 114/5, 9th Cross, 2nd Main, Chamarajpet, Bangalore-18 |
| | Nationality | : | Indian |
| 7) | Name of the Printer | : | ILA Mudrana |
| | Address | : | No. 36, 40 Ft. Road, Raghavanagar<br>New Timberyard Layout, Bangalore - 560 026 |
| | Nationality | : | Indian |
| 8) | Registration No. | : | KARKAN/2007/22289 |

I, H.S. Rajeshwari here by declare that the particulars given above are true to the best of my knowledge and belief.

Sd/-

**H.S. Rajeshwari**

Publisher

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 Reg.: KA/BGS/2074/2010-12

# ಸುಮ್ಮನೆ....

ಮುರಿದುಬಿದ್ದ ಮನೆಯ ಅವಶೇಷಗಳಿಂದ
ನನ್ನ ಭಗ್ನಮುಖವನ್ನೂ ಎತ್ತಿಕೊ
ನಿನ್ನ ಮದುಮಗಳ ಮುಖ
ಕಾಲನಾಕ್ರಮಣಕ್ಕೆ ಸಿಕ್ಕಿಕೊಂಚ ಬದಲಾಗಿದೆ.
ನಾನು ನೆನಪಿಸಿಕೊಳ್ಳುವುದಿಲ್ಲ
ನಂಬಿಕೆ ದ್ರೋಹದ ಆ ಮಧುಚಂದ್ರ
ನಾವಿಬ್ಬರು
ನಾನು ಮತ್ತು ನೀನು ಎಂಥ ಸಿನಿಕರು!
ನನ್ನನ್ನು ಪ್ರೀತಿಸುವುದು ಆಗ ಕಷ್ಟವಾಗಿದ್ದರೆ
ಈಗಂತೂ ಇನ್ನೂ ಕಷ್ಟ
ಆದರೆ ಒಂದು ದಿನವಾದರೂ ಪ್ರೀತಿಸು
ಈ ಅರವತ್ತೈದು ಕೆ.ಜಿ. ತೂಕದ
ಮುಪ್ಪು ಆವರಿಸುತ್ತಿರುವ ದೇಹವನ್ನ

ನಿಷ್ಕ್ರೀಯ ಕರುಳನ್ನ
ಜಘನವನ್ನ
ಸುಮ್ಮನೆ ತಮಾಷೆಗೆಂದಾದರೂ ಪ್ರೀತಿಸು
ನೀನು ನಿಜವಾಗಿ ನನ್ನನ್ನು ಪ್ರೀತಿಸಿದ್ದರೆ
ಬದುಕು ಹೇಗಿರುತಿತ್ತೆಂದು
ತೋರಿಸುವುದಕ್ಕಾದರೂ
ಒಮ್ಮೆ ಪ್ರೀತಿಸು...

■ ಮಾಧವಿ ಕುಟ್ಟಿ
ಕನ್ನಡಕ್ಕೆ : ಗೌತಮಿ

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018